# ಶಾಲಾ ಶಿಕ್ಷಕನ ಅಂತರಾಳದ ನುಡಿಗಳು

## ಹೇಮ್‌ರಾಜ್ ಭಟ್



ಕನ್ನಡ ಅನುವಾದ : ಶ್ರೀ ಶ್ರೀಧರ್ ಎ

ಅಜೀಮ್ ಪ್ರೇಮ್‌ಜೀ ವಿಶ್ವವಿದ್ಯಾಲಯ ಪ್ರಕಾಶನ





# ಶಾಲಾ ಶಿಕ್ಷಕನ ಅಂತರಾಳದ ನುಡಿಗಳು

ಹೇಮ್‌ರಾಜ್ ಭಟ್

ಕನ್ನಡ ಅನುವಾದ: ಶ್ರೀ ಶ್ರೀಧರ್.ಎ
ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ
ಮಾರಗೌಡನಹಳ್ಳಿ, ಮಂಡ್ಯ ಉತ್ತರ ವಲಯ, ಮಂಡ್ಯ

ಅಜೀಮ್ ಪ್ರೇಮ್‌ಜೀ ವಿಶ್ವವಿದ್ಯಾಲಯ ಪ್ರಕಾಶನ

ಪ್ರಥಮ ಮುದ್ರಣ: 2012
ಪ್ರತಿಗಳು: 1000

ದ್ವಿತೀಯ ಮುದ್ರಣ: 2015
ಪ್ರತಿಗಳು: 1000

ಕನ್ನಡ ಅನುವಾದ: ಶ್ರೀ ಶ್ರೀಧರ್ ಎ
ಪ್ರಕಟಣೆ:

ಶಾಲಾ ಶಿಕ್ಷಕನ ಅಂತರಾಳದ ನುಡಿಗಳು – ಹೇಮ್‌ರಾಜ್ ಭಟ್
ಹಿಂದಿ ಮೂಲ: ಏಕ್ ಅಧ್ಯಾಪಕ್ ಕಿ ಡೈರಿ ಕೆ ಕುಚ್ಛ್ ಪನ್ನೆ @ ಹೇಮ್‌ರಾಜ್ ಭಟ್

**ಪ್ರಕಾಶಕರು**
ಅಜೀಮ್ ಪ್ರೇಮ್‌ಜೀ ವಿಶ್ವವಿದ್ಯಾಲಯ
ಪಿಕ್ಸಲ್ ಪಾರ್ಕ್, ಬಿ ಬ್ಲಾಕ್,
ಪಿಇಎಸ್ ಎಸ್ ಇ ಕ್ಯಾಂಪಸ್,
ಇಲೆಕ್ಟ್ರಾನಿಕ್ ಸಿಟಿ, ಹೊಸೂರ್ ರಸ್ತೆ
ಬೆಂಗಳೂರು – 560 100
ದೂರವಾಣಿ: +91 80 6614 4900/ 01/ 02

**ಮುದ್ರಣ:**
ಎಸ್‌ಸಿಪಿಎಲ್
2ನೇ ಮಹಡಿ, 2/1, ಜೆಸಿ ಇಂಡಸ್ಟ್ರೀಯಲ್ ಏರಿಯಾ
ಯೆಲಚೇನಹಳ್ಳಿ, ಕನಕಪುರ ರಸ್ತೆ
ಬೆಂಗಳೂರು – 560 062
ದೂರವಾಣಿ: +91 80 2686 0585/ 6583 3033
www.scpl.net

# ಮುನ್ನುಡಿ

ಮೊಟ್ಟ ಮೊದಲಿಗೆ ನಾನು ಈ ಪುಸ್ತಕವನ್ನು ಓದಿದಾಗ ಒಂದೆರಡು ಮೂರು ದಿನಗಳವರೆಗೆ ಸ್ವಲ್ಪ ಅಂತರ್ಮುಖಿಯಾಗಿದ್ದೆ. ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡಲು ಶುರು ಮಾಡಿದಾಗಿನಿಂದ ನಡೆಸಿದ ಚರ್ಚೆಗಳು, ಆಡಿದ ಮಾತುಗಳು, ಬರೆದ ವರದಿಗಳು ಎಲ್ಲವೂ ಒಂದೊಮ್ಮೆ ಮನಸ್ಸಿನಲ್ಲಿ ಮೂಡಿ ಬಂದವು.

ಇತ್ತೀಚಿನ ದಿನಗಳಲ್ಲಿ "ತಳಮಟ್ಟದಿಂದ ಮೇಲ್ಮಟ್ಟದೆಡೆಗೆ" "ಸಮಗ್ರ ಬೆಳವಣಿಗೆ" "ಸಮಾನ ಅವಕಾಶ" ಎಂಬ ಇನ್ನೆಷ್ಟೋ ಪದಗಳು ದಿನನಿತ್ಯ ಬಳಕೆಯಲ್ಲಿದ್ದರೂ, ರೂಪಿಸುತ್ತಿರುವ ಯೋಜನೆಗಳು ಮತ್ತು ಕಾರ್ಯಗಳು ತಳಮಟ್ಟದ ಕಾರ್ಯಕರ್ತರ ಸಂವೇದನೆಗಳನ್ನಾಗಲೀ ಅಥವಾ ಯೋಜನೆಯ ಫಲಾನುಭವಿಗಳ ಅವಶ್ಯಕತೆಗಳನ್ನಾಗಲೀ ಪರಿಗಣಿಸಿದ್ದು ತೀರಾ ಕಡಿಮೆಯೇ. ಇಲ್ಲೆಲ್ಲೋ ಕುಳಿತು ನಾವು ಪರಿಭಾವಿಸಿದಂತೆ ಅವರ ಅವಶ್ಯಕತೆಗಳನ್ನು ಅಥವಾ ಸಮಸ್ಯೆಗಳನ್ನು ಕಲ್ಪಿಸಿಕೊಂಡು ಯೋಜನೆಗಳನ್ನು ರೂಪಿಸುತ್ತೇವೆ. ಅವರೇ ಪರಿಭಾವಿಸುವಂತೆ ಅವರ ಅವಶ್ಯಕತೆಗಳೇನು ಅಥವಾ ಸಮಸ್ಯೆಗಳೇನು ಎಂದು ಹೇಳಿಕೊಳ್ಳಲು ಕಲ್ಪಿಸುವ ವೇದಿಕೆಗಳು ಬಹಳ ಕಡಿಮೆ.

ಹೀಗಿರುವಾಗ ಉತ್ತರಾಖಂಡ್ ರಾಜ್ಯದ ಗುಡ್ಡಗಾಡಿನ ಮೂಲೆಯ ಶಾಲೆಯೊಂದರಲ್ಲಿ ಶಿಕ್ಷಕನಾಗಿ ಅತ್ಯುತ್ತಮ ಕೆಲಸಮಾಡಿ ಮಿಂಚಿನಂತೆ ಮಾಯವಾಗಿ ಹೋದ ಹೇಮ್‌ರಾಜ್ ಭಟ್ಟರ ಈ ಪುಸ್ತಕ ನಮ್ಮಲ್ಲೂ ಹೊಸ ಮಿಂಚಿನ ಸಂಚಾರವನ್ನು ಮೂಡಿಸುತ್ತದೆ ಎಂಬುದು ನನ್ನ ನಂಬಿಕೆ. ಅವರ ದಿನಚರಿಯ ಪ್ರತೀ ಸಾಲು ವಾಸ್ತವದ ನೆರಳನ್ನು ತೋರಿಸುವುದಲ್ಲದೆ, ಶಿಕ್ಷಕರ ಸಂವೇದನೆಯನ್ನೂ ತೋರಿಸುತ್ತದೆ. ಇದು ಕೇವಲ ಆ ಶಿಕ್ಷಕನೊಬ್ಬನ ಸಂವೇದನೆಯ ಮಾತುಗಳಲ್ಲ, ಭಾರತದ ಉದ್ದಗಲಕ್ಕೂ ಇರುವ ಅನೇಕ ಶಿಕ್ಷಕರೂ ಅಷ್ಟೇ ಸೂಕ್ಷ್ಮತೆಯಿಂದ, ಸಂವೇದನೆಯಿಂದ ಕೆಲಸಮಾಡುತ್ತಾರೆ ಎಂಬ ಮಾತನ್ನು ನನ್ನ ಅನುಭವದಿಂದ ಹೇಳಬಲ್ಲೆ.

ಆ ಎಲ್ಲ ಶಿಕ್ಷಕರಿಗೆ ಸ್ಪಂದಿಸಲು ನಮ್ಮಲ್ಲಿ ಇಚ್ಛಾಶಕ್ತಿಯ ಕೊರತೆಯಿದೆ. ಅಂತಹ ಇಚ್ಛೆಗೆ ಬೇಕಾದ ಬೆಳಕನ್ನು, ಒಳನೋಟವನ್ನು ಹೇಮ್‌ರಾಜ್ ಭಟ್ಟರ ದಿನಚರಿಯ ಸಾಲುಗಳು ನೀಡಲಿ ಮತ್ತು ಶಿಕ್ಷಕರಿಗೆ ಸ್ಫೂರ್ತಿಯಾಗಲಿ ಎಂದು ಹಾರೈಸುತ್ತಾ, ಅನುವಾದ ಮಾಡಿದ ಶ್ರೀಧರ್‌ರವರನ್ನು ಅಭಿನಂದಿಸುತ್ತಾ, ಅವರಿಗೆ ಸಹಕಾರವನ್ನಿತ್ತ ಗೋಪಾಲಕೃಷ್ಣ, ಶಿವಶಂಕರ್ ಮತ್ತು ಗಿರೀಶ್‌ರವರನ್ನು ಶ್ಲಾಘಿಸುತ್ತಾ, ಹೊರತರಲು ಪ್ರೋತ್ಸಾಹಿಸಿದ ನೀಲಾಂಜನ್‌ರವರಿಗೆ ವಂದಿಸುತ್ತಾ, ಈ ಕಿರುಹೊತ್ತಿಗೆಯು ಶಿಕ್ಷಣ ಕ್ಷೇತ್ರದಲ್ಲಿ ತೊಡಗಿಸಿಕೊಂಡಿರುವ ಹೆಚ್ಚಿನ ಜನರನ್ನು ತಲುಪಲಿ ಎಂದು ಆಶಿಸುತ್ತೇನೆ.

**– ಉಮೇಶ್ ಪಾದೆ**

ಅಜೀಮ್ ಪ್ರೇಮ್‌ಜೀ ಫೌಂಡೇಷನ್

ಜಿಲ್ಲಾ ಸಂಸ್ಥೆ, ಮಂಡ್ಯ

# ಅರ್ಪಣೆ

"ಎರೆಮರೆಯ ಕಾಯಿಯಂತೆ
ನಾಡಿನ ಮಕ್ಕಳ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸುತ್ತಿರುವ
ಶಿಕ್ಷಕರ ಸಮುದಾಯಕ್ಕೆ"

# ಸ್ಮರಣೆ


**ಹೇಮ್‌ರಾಜ್ ಭಟ್‌ರವರ ಜೀವನ ಕಥೆಯನ್ನು ಹೊರತರಲು ಸಹಕರಿಸಿದ ಕೆಳಗಿನ ಅಜೀಮ್ ಪ್ರೇಮ್‌ಜೀ ಫೌಂಡೇಷನ್ ಮತ್ತು ವಿಶ್ವವಿದ್ಯಾಲಯದ ಸದಸ್ಯರಿಗೆ ನಮ್ಮ ಧನ್ಯವಾದಗಳು.**

❖ **ಅನಂತ ಗಂಗೋಲ, ಅಂಬರೀಶ್ ಬಿಸ್ತ್, ಎಸ್. ಗಿರಿಧರ್ ಮತ್ತು ಉತ್ತರಾಖಂಡ ತಂಡದ ಎಲ್ಲಾ ಸದಸ್ಯರು,**
ಹೇಮರಾಜ್‌ರವರ ಕೆಲಸವನ್ನು ಪತ್ತೆಹಚ್ಚಿ ಅವರ ವಿಶಾಲ ಧ್ವನಿಯನ್ನು, ಒಳಗುದಿಯನ್ನೂ ಎಲ್ಲರಿಗೂ ತಲುಪಿಸುವ ಮಹತ್ತರ ಕಾರ್ಯವನ್ನು ಕೈಗೊಂಡಿರುತ್ತಾರೆ.

❖ **ರಾಜೇಶ್ ಉತ್ಸಾಹಿ**
ಇವರು ತಮ್ಮ ಸಂಪಾದಕೀಯ ಮತ್ತು ಗುಣಮಟ್ಟ ಕಾಯ್ದುಕೊಳ್ಳುವಲ್ಲಿ ಅಮೂಲ್ಯವಾದ ಸಲಹೆಗಳನ್ನು ನೀಡಿರುತ್ತಾರೆ.

❖ **ರಾಮ್‌ನಿಕ್ ಮೋಹನ್**
ಹೇಮರಾಜ್ ಭಟ್‌ರ ಕವನವನ್ನು ಇಂಗ್ಲೀಷ್ ಭಾಷೆಗೆ ಅನುವಾದ ಮಾಡುವಲ್ಲಿ ಅದರ ಮೂಲವನ್ನು ಉಳಿಸಿರುವುದಾಗಿ ಖಚಿತಪಡಿಸಿರುತ್ತಾರೆ.

❖ **ಜಯಶ್ರೀ ನಾಯರ್ ಮಿಶ್ರ**
ಇವರು ಮುಖಪುಟ ವಿನ್ಯಾಸ ಮತ್ತು ಇತರೆ ವಿನ್ಯಾಸಗಳಲ್ಲಿ ಸಲಹೆ ಸೂಚನೆಗಳನ್ನು ನೀಡಿರುತ್ತಾರೆ.

❖ **ಆಕಾಶಿ ಕೌಲ್**
ಇವರು ಸಂಪಾದಕೀಯ ಕೆಲಸಗಳ ಜೊತೆಗೆ ಯೋಜನೆಯ ಸಂಪೂರ್ಣ ಜವಾಬ್ದಾರಿಯನ್ನು ನಿರ್ವಹಿಸಿರುತ್ತಾರೆ.

❖ **ಡಾ. ಹೇಮಲತ ತಿವಾರಿ (ಉಪನ್ಯಾಸಕರು ಎಸ್‌ಇಆರ್‌ಟಿ), ಡಾ. ಮೀನ ಮನ್ರಾಲ್ (ಕುಮೋನ್ ಯುನಿವರ್ಸಿಟಿ) ಮತ್ತು ರೇಖಾ ಚಮೋಲಿ (ಸಹ ಶಿಕ್ಷಕರು ಹಾಗೂ ಹೇಮರಾಜ್‌ರವರ ಆತ್ಮೀಯ ಸ್ನೇಹಿತೆ) –**
ಹೇಮರಾಜ್ ಭಟ್ ಮತ್ತು ಅವರ ಬದುಕಿನ ವಿವರಗಳನ್ನು ನೀಡಿರುತ್ತಾರೆ

❖ **ಡಾ. ಶಾರದ ಜೈನ್ (ನಿರ್ದೇಶಕರು – ಸಂಧಾನ್)**
ಇವರು ಹಿಂದಿ ಭಾಷೆಯಿಂದ ಇಂಗ್ಲೀಷ್ ಭಾಷೆಗೆ ತರ್ಜುಮೆ ಮಾಡಿರುತ್ತಾರೆ

❖ **ಶ್ರೀ ಎಮ್. ಕೆ. ಶಂಕರನಾರಾಯಣ ಭಟ್ಟ**
ಇವರು ಕನ್ನಡದ ಕರಡು ಪ್ರತಿಯನ್ನು ನೋಡಿ ಸಲಹೆ ಸೂಚನೆಗಳನ್ನು ನೀಡಿರುತ್ತಾರೆ

❖ **ವಿಶೇಷ ಧನ್ಯವಾದಗಳು:**

ಶ್ರೀ ಶ್ರೀಧರ್ .ಎ, ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಮಾರಗೌಡನಹಳ್ಳಿ, ಇವರು ಮೂಲ ದಿನಚರಿಯನ್ನು ಕನ್ನಡಕ್ಕೆ ಅನುವಾದ ಮಾಡುವ ಕೆಲಸವನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸಿರುತ್ತಾರೆ.

# ಬಾಲಸಖನ ನೆನಪುಗಳು...

ನವೆಂಬರ್ 26, 2008 ನಾನು ಒಂದು ಕೆಲಸದ ನಿಮಿತ್ತ ಉದಯಪುರದಲ್ಲಿದ್ದೆ. ಗೆಳೆಯ ಅಂಬರೀಶ್ ಕರೆ ಮಾಡಿ ಹೇಮರಾಜ್ ಭಟ್ಟರು ತೀರಿಕೊಂಡ ಸುದ್ದಿ ತಿಳಿಸಿದರು. ಒಂದು ರಸ್ತೆ ಅಪಘಾತದಲ್ಲಿ ಹೇಮರಾಜ ಭಟ್ಟರು ನಿಧನ ಹೊಂದಿದ್ದರು. ಆ ಸುದ್ದಿ ಕೇಳಿ ನನಗೆ ದೊಡ್ಡ ಆಘಾತವಾಗಿತ್ತು. ನನ್ನ ದೇಹವೆಲ್ಲ ಸಣ್ಣದಾಗಿ ಕಂಪಿಸಲು ಪ್ರಾರಂಭಿಸಿತು. ಕೆಲಕಾಲ ಮಾತುಗಳೇ ಹೊರಡಲಿಲ್ಲ. ಏನು ಮಾಡಬೇಕೆಂದೇ ತೋಚಲಿಲ್ಲ. ಯಾರಾದರೂ ನಾನು ಕೇಳಿದ ಸುದ್ದಿ ಸುಳ್ಳು ಎಂದು ತಿಳಿಸಬಹುದೆಂಬ ಸಣ್ಣ ಆಸೆಯಿಂದ ಗೆಳೆಯರೆಲ್ಲರಿಗೂ ಕರೆ ಮಾಡಿ ವಿಚಾರಿಸಿದೆ. ಆದರೆ ದುರದೃಷ್ಟವಶಾತ್ ಅದು ಸುಳ್ಳಾಗಿರಲಿಲ್ಲ.

ಇದಾದ ಕೆಲದಿನಗಳವರೆಗೂ ನಾನು ನಾನಾಗಿರಲಿಲ್ಲ. ಭಟ್ಟರು ನಮ್ಮ ಮಧ್ಯೆ ಇಲ್ಲವೆಂಬ ಕಹಿಸತ್ಯವನ್ನು ಅರಗಿಸಿಕೊಳ್ಳಲು ಆಗಿರಲಿಲ್ಲ. ಪ್ರತಿದಿನ ಪ್ರತಿಕ್ಷಣ ಅವರ ನೆನಪುಗಳು ಎಡಬಿಡದೆ ಕಾಡುತ್ತಿದ್ದವು. ಭಟ್ಟರ ಅನಿರೀಕ್ಷಿತ ಅಗಲಿಕೆ ಅವರ ಕುಟುಂಬದವರನ್ನು ಮಾತ್ರವಲ್ಲ ನನ್ನಂಥ ಅನೇಕರನ್ನು ದುಃಖದ ಮಡುವಿನಲ್ಲಿ ಮುಳುಗಿಸಿತ್ತು.

ಹೇಮರಾಜ್ ಭಟ್ಟರು ಒಬ್ಬ ಸೌಮ್ಯ, ಗಂಭೀರ ಸ್ವಭಾವದ, ಸಾಮಾನ್ಯ ವ್ಯಕ್ತಿಯಾಗಿದ್ದರು. ಪಟ್ಟಣದಿಂದ ದೂರವಿರುವ ಗುಡ್ಡಗಾಡು ಪ್ರದೇಶದ ಒಂದು ಸಣ್ಣ ಹಳ್ಳಿಯ ಏಕೋಪಾಧ್ಯಾಯ ಶಾಲೆಯಲ್ಲಿ ಸಹಶಿಕ್ಷಕರಾಗಿದ್ದರು. ಪರಿಚಯವಾದ ಹೊಸದರಲ್ಲಿ ತೀರ ಸಾಮಾನ್ಯರೆನಿಸುತ್ತಿದ್ದ ಭಟ್ಟರು ಅವರೊಡನೆ ಒಡನಾಟ ಹೆಚ್ಚಾದಂತೆ ಎಂಥವರ ಮೇಲೂ ಪ್ರಭಾವ ಬೀರುವ ಆಕರ್ಷಣೀಯ ವ್ಯಕ್ತಿತ್ವ ಉಳ್ಳವರಾಗಿದ್ದರು. 'ಬಾಲಸಖ' ಎಂಬ ಹೆಸರಿನಲ್ಲಿ ಅವರು ಬರೆಯುತ್ತಿದ್ದ ಕಥೆಗಳು, ಕವನಗಳು ಮಕ್ಕಳ ಮನಸ್ಸನ್ನು ಆಕರ್ಷಿಸುತ್ತಿದ್ದವು.

ಉದಯಪುರದಿಂದ ಬಂದ ನಂತರ ಹೇಮರಾಜರ ಮನೆಗೆ ಹೋಗುವ, ಅವರ ಮನೆಯವರನ್ನು ಭೇಟಿಯಾಗುವ ಬಯಕೆ ತೀವ್ರವಾಯಿತು. ಗೆಳೆಯರಾದ ಹೇಮಲತ ಮತ್ತು ಅಂಬರೀಷ್‌ರಿಗೆ ವಿಷಯ ತಿಳಿಸಿದಾಗ ಅವರೂ ಇದೇ ಇಚ್ಛೆಯನ್ನು ವ್ಯಕ್ತಪಡಿಸಿದರು. ಒಂದು ರಜಾದಿನದಂದು ಧನೇಟಿಯಲ್ಲಿನ ಅವರ ಮನೆಗೆ ಹೋಗಬೇಕೆಂದು ನಿರ್ಧರಿಸಿದೆವು. ಪ್ರಯಾಣದ ಉದ್ದಕ್ಕೂ ಭಟ್ಟರ ನೆನಪುಗಳನ್ನು ಮೆಲುಕು ಹಾಕುತ್ತ ಹೊರಟೆವು. ಆ ನೆನಪುಗಳು ನಮ್ಮ ಮುಂದೆ ಒಂದು ಚಲನ ಚಿತ್ರದಂತೆ ಚಲಿಸುತ್ತಿದ್ದವು. ಅದು ಒಂದು ಮಧ್ಯಂತರವಿಲ್ಲದ, ಅಂತ್ಯವೂ ಇಲ್ಲದ ಚಲನಚಿತ್ರ. ಇನ್ನು ಮುಂದೆ ಇದು ನಮ್ಮ ಮನದಲ್ಲಿ ನಿರಂತರ ಚಲಿಸುತ್ತಲೇ ಇರುವ ಚಲನಚಿತ್ರ.

ಮಾರ್ಗ ಮಧ್ಯದಲ್ಲಿ ಹೇಮರಾಜರ ಸಹೋದರ ಚಂದ್ರಮೋಹನ್‌ರವರು ನಮ್ಮನ್ನು ಕೂಡಿಕೊಂಡರು. ಸಹಜವಾಗಿಯೇ ನಾವೆಲ್ಲ ಅಪಘಾತ ನಡೆದ ಸ್ಥಳದಲ್ಲಿ ನಿಂತೆವು. ಕಡಿದಾದ ರಸ್ತೆಯ ಎರಡೂ ಕಡೆಗಳಲ್ಲಿ ಆಳವಾದ ಕಂದಕಗಳಿದ್ದವು. ಒಂದು ಕಡೆ ಸುಮಾರು 400 ಅಡಿಗಳಷ್ಟು ಕೆಳಗೆ ಉರುಳಿ ಬಿದ್ದಿದ್ದ ಮ್ಯಾಕ್ಸಿಕ್ಯಾಬ್ ಖಾಲಿಯಾದ ಬೆಂಕಿ ಪೊಟ್ಟಣದಂತೆ ಕಾಣುತ್ತಿತ್ತು. ಇಡೀ ಸನ್ನಿವೇಶ ಆ ದುರ್ಘಟನೆಗೆ ಸಾಕ್ಷಿಯಾಗಿ ನೀರವವಾಗಿತ್ತು. ಆ ಪ್ರಪಾತದೊಳಗಿಂದ ಎದ್ದು ಬರುತ್ತಿದ್ದ ನಮ್ಮ ಮಿತ್ರನ ನೆನಪುಗಳು ನಮ್ಮ ಹೃದಯಗಳನ್ನು ಕಲಕುತ್ತಿದ್ದವು. ಅಲ್ಲಿಂದ ಮುಂದೆ ಮನೆ ತಲುಪುವವರೆಗೆ ಯಾರಿಗೂ ಮಾತನಾಡುವ ಮನಸ್ಸಾಗಲಿಲ್ಲ.

ಹೇಮರಾಜರ ಕುಟುಂಬದವರು ನಮಗೆ ಪರಿಚಯವಿರಲಿಲ್ಲ. ಎಲ್ಲರು ಮೌನವಾಗಿದ್ದರು. ಉಮ್ಮಳಿಸಿ ಬರುತ್ತಿದ್ದ ದುಃಖವನ್ನು ತಡೆಯಲು ಎಷ್ಟೇ ಪ್ರಯತ್ನಿಸುತ್ತಿದ್ದರೂ ಕಣ್ಣೀರ ಮೂಲಕ ಅದು ಹೊರಗೆ ಬರುತ್ತಲೇ ಇತ್ತು. ಇಂಥ ಸಂದರ್ಭದಲ್ಲಿ ನಮಗಾರಿಗೂ ಆ ಮೌನ ಮುರಿಯುವ ಧೈರ್ಯವಾಗಲಿಲ್ಲ. ಭಟ್ಟರ ಕಿರಿಯ ಸಹೋದರ ಗಿರಿರಾಜ ಮೌನಮುರಿದು, ಕಂಬನಿ ತುಂಬಿದ ಕಣ್ಗಳಲ್ಲೆ ಗದ್ಗದಿತರಾಗಿ ಏನಾದರೂ ಮಾಡಿ ಅವರ ಅಣ್ಣನ ಕೆಲಸವನ್ನ ಜನರಿಗೆ ತಲುಪಿಸುವಂತೆ ವಿನಂತಿಸಿಕೊಂಡರು. ಅವರ ದನಿಯಲ್ಲಿ ಒಂದು ಬಗೆಯ ನಿರ್ಲಿಪ್ತತೆ ಮತ್ತು ಒಂದಿಷ್ಟು ಒತ್ತಾಯಗಳು ಮಿಳಿತವಾಗಿದ್ದವು. ಅವರ ಮಾತಿನಲ್ಲಿ ಇದ್ದ ದೃಢತೆ ಮತ್ತು ಆಕಾಂಕ್ಷೆಗಳು ನಮ್ಮನ್ನು ಹೇಗೆ, ಏನು ಇತ್ಯಾದಿ ಪ್ರಶ್ನೆಗಳನ್ನು ಆಲೋಚಿಸದೆ ಒಪ್ಪಿಕೊಳ್ಳುವಂತೆ ಮಾಡಿದ್ದವು.

ಅಂದು ಸಂಜೆ ಅಲ್ಲೇ ಉಳಿದುಕೊಂಡೆವು. ಅವರ ಕೃತಿಸಾಗರದ ಮಂಥನ ಆಗ ಶುರುವಾಯಿತು. ಅವರ ಒಂದು ಕೊಠಡಿಯ ಪುಟ್ಟ ಮನೆಯಲ್ಲಿ ಲ್ಯಾಪ್‌ಟಾಪ್, ಅದರಲ್ಲಿ ವ್ಯವಸ್ಥಿತವಾಗಿ ಜೋಡಿಸಿದ್ದ ವಿವಿಧ ವಿಷಯಗಳ ಫೋಲ್ಡರ್‌ಗಳು, ಡೈರಿಗಳು, ಬೇರೆ ಬೇರೆ ಫೈಲ್‌ಗಳು, ಪುಸ್ತಕಗಳು, ಪ್ರಕಟಿತ ಹಾಗೂ ಅಪ್ರಕಟಿತ ಬರವಣಿಗೆಗಳು... ಹೀಗೆ ಎಲ್ಲವನ್ನೂ ಅವಲೋಕಿಸಿದೆವು. ನಮ್ಮ ಮಂಥನ ಕಾರ್ಯ ಮುಂದುವರಿದಂತೆಲ್ಲ ನಮ್ಮ ಮುಂದೆ ಒಂದು ಹೊಸ ಪ್ರಪಂಚವೇ ತೆರೆದುಕೊಂಡಿತ್ತು. ಆಗಲೇ ನಮಗೆ ಅರಿವಾದದ್ದು ನಾವು ಭಟ್ಟರ ಕುರಿತು ತಿಳಿದುಕೊಂಡಿದ್ದು ತುಂಬಾ ಕಡಿಮೆ ಎಂದು. ಆ ಸುಂದರ ಲೋಕದಲ್ಲಿ ಮಧುರವಾದ ಕವನಗಳು, ವೈವಿಧ್ಯಮಯ ಕಥೆಗಳು, ವಿವಿಧ ಪತ್ರಿಕೆಗಳಿಗೆ ಬರೆದಿದ್ದ ಪತ್ರಗಳು, ವಿವಿಧ ವಿಚಾರಗಳ ಮೇಲೆ ಬರೆದ ಲೇಖನಗಳು, ಅವರ ದಿನಚರಿಗಳು, ಅನೇಕ ಪುಸ್ತಕಗಳು ಇದ್ದವು. ಭಟ್ಟರ ಸಾಹಿತ್ಯಸೃಷ್ಟಿ, ಸೃಜನಶೀಲತೆಗಳು ಕೇವಲ ಶಿಶು ಗೀತೆಗಳಿಗೆ ಸೀಮಿತವಾಗಿರಲಿಲ್ಲ. ಅವರ ಪ್ರತಿಭೆ ವಿಚಾರಶೀಲತೆಗಳು ನಾವಂದುಕೊಂಡದ್ದಕ್ಕಿಂತ ಬಹಳ ವಿಸ್ತಾರವಾಗಿದ್ದವು. ಗಡವಾಲಿ ಭಾಷೆಗೆ ಅನುವಾದ ಮಾಡಿದ್ದ ಭಗವದ್ಗೀತೆಯ ಪ್ರತಿ, ಪ್ರಜಾಪತಿ ಬ್ರಹ್ಮಕುಮಾರಿ ಆಶ್ರಮದಿಂದ ಪ್ರಕಟಿತವಾಗಿದ್ದ ಅನೇಕ ಅಧ್ಯಾತ್ಮಿಕ ವಿಚಾರದ ಲೇಖನಗಳು ಅಲ್ಲಿದ್ದವು. ಅವೆಲ್ಲ ಭಟ್ಟರ ಅಪರಿಮಿತ ಜ್ಞಾನಸಾಗರಕ್ಕೆ ಸಾಕ್ಷಿಗಳಾಗಿದ್ದವು.

ಇದಾದ ನಂತರ ಅವರ ಶಾಲೆಯನ್ನೊಮ್ಮೆ ನೋಡಬೇಕೆನಿಸಿತು. ಅದು ಸಾಧಾರಣ ಶಾಲೆಯಾಗಿರಲಿಲ್ಲ. ಇಲ್ಲಿ ಕಲಿಸುತ್ತಿದ್ದುದು ಒಬ್ಬ ಶಿಕ್ಷಕನಲ್ಲ; ಬಾಲಸಖನೆಂಬ ಸ್ನೇಹಿತ. ಅಂದು ರಜಾ ದಿನವಾಗಿದ್ದರಿಂದ ಶಾಲೆ ಮುಚ್ಚಿತ್ತು. ಶಿಕ್ಷಕನ ಕಾರ್ಯವೈಖರಿ ತಿಳಿಯಲು ಶಾಲೆ ತೆರೆಯಲೇಬೇಕಾದ ಅಗತ್ಯವಿಲ್ಲ. ಶಿಕ್ಷಕನನ್ನು ಪರಿಚಯಿಸುವ ಅನೇಕ ಹೆಗ್ಗುರುತುಗಳು ಶಾಲಾ ಕಟ್ಟಡದ ಪ್ರತಿ ಗೋಡೆಯ ಮೇಲೂ ಇದ್ದವು. 'ಸಾ ವಿದ್ಯಾ ಯಾ ವಿಮುಕ್ತಯೇ', 'ತಮಸೋಮಾ ಜ್ಯೋತಿರ್ಗಮಯಾ' ಎಂಬ ಇತ್ಯಾದಿ ದೊಡ್ಡ ದೊಡ್ಡ ಬರಹಗಳೇನೂ ಅಲ್ಲಿರಲಿಲ್ಲ. ಬದಲಿಗೆ ಪ್ರವೇಶದ್ವಾರದಲ್ಲಿದ್ದ **'ನನ್ನ ಪುಟಾಣಿ ಮಿತ್ರರಿಗೆ ಆತ್ಮೀಯ ಸ್ವಾಗತ'** ಎಂಬ ಬರಹ ಆ ಶಾಲೆಯ ಅಸಾಧಾರಣತೆಯನ್ನು ಸಾರುತ್ತಿತ್ತು.

ಅಪರಿಚಿತ ಆಗಂತುಕರನ್ನು ಕಂಡ ಹಳ್ಳಿಯ ಜನ, ಮಕ್ಕಳು ಅಲ್ಲಿಗೆ ಬಂದರು. "ಭಟ್ಟರು ಎಂದೂ ಮಕ್ಕಳ ಜತೆ ಶಿಕ್ಷಕ ಭಾವದಿಂದ ನಡೆದುಕೊಳ್ಳುತ್ತಿರಲಿಲ್ಲ, ಅವರು ಮಕ್ಕಳ ಪಾಲಿಗೆ 'ಬಾಲಸಖ'ನೆಂಬ ಗೆಳೆಯರಾಗಿದ್ದರು. ಒಬ್ಬ ಸ್ನೇಹಿತನಂತೆ ಮಕ್ಕಳ ಜತೆ ಬೆರೆತು ಕಲಿಸುತ್ತಿದ್ದರು. ಮಕ್ಕಳು ಬರಿ ನೆಲದ ಮೇಲೆ ಕುಳಿತುಕೊಳ್ಳಬಾರದೆಂದು ಹಳೆಯ ಬಟ್ಟೆ ಹಾಗೂ ಗೋಣಿಚೀಲಗಳಿಂದ ಮೆತ್ತನೆಯ ಹಾಸನ್ನು ಸ್ವತಃ ತಾವೆ ಕೈಯಿಂದ ಹೊಲಿದು ಪ್ರತಿ ಮಗುವಿಗೂ ಉತ್ತಮ ಆಸನದ ವ್ಯವಸ್ಥೆ ಮಾಡಿದ್ದರು. ತಾವೂ ಸಹ ಕುರ್ಚಿಗೆ ಬದಲು ಇಂತಹುದರ ಮೇಲೆಯೆ ಕುಳಿತುಕೊಳ್ಳುತ್ತಿದ್ದರು..." ಹೀಗೆ ತಮ್ಮ ನೆಚ್ಚಿನ ಗುರುಗಳ ಬಗ್ಗೆ ನೆನಪುಗಳನ್ನು ಹಂಚಿಕೊಂಡರು. ನಿಜಕ್ಕೂ ಭಟ್ಟರಿಗೆ ಮಕ್ಕಳ ಮೇಲಿದ್ದ ಪ್ರೀತಿ, ಆತ್ಮೀಯತೆ ಮತ್ತು ಅವರ ಸಂವೇದನಾಶೀಲತೆ ಕಂಡು ಆಶ್ಚರ್ಯವಾಯಿತು. ಇಷ್ಟೆಲ್ಲಾ ಮಾಡಿದ್ದರೂ ಎಂದೂ ಯಾರ ಮುಂದೆಯು ಹೇಳಿಕೊಂಡಿದ್ದನ್ನು ನಾವು ಕೇಳಿರಲಿಲ್ಲ. ಏನೂ ಮಾಡದೆ ಎಲ್ಲವನ್ನು ನಾನೇ ಮಾಡಿದೆ ಎಂದು ಕೊಚ್ಚಿಕೊಳ್ಳುವವರ ನಡುವೆ ಭಟ್ಟರು ತುಂಬಾ ವಿಶೇಷ ವ್ಯಕ್ತಿಯಾಗಿ ಕಂಡರು.

ಮುಂದಿನ ಪುಟಗಳಲ್ಲಿ ನೀವು ಹೇಮರಾಜ ಭಟ್ಟರ ದಿನಚರಿಯ ಕೆಲವು ಪುಟಗಳನ್ನು ಓದುವಿರಿ. ಭಟ್ಟರು ಎದುರಿಸಿದ ಸವಾಲುಗಳು, ಪ್ರಸ್ತುತ ವ್ಯವಸ್ಥೆಯೊಂದಿಗೆ ಅವರ ಪ್ರತಿನಿತ್ಯದ ಸಂಘರ್ಷಗಳು, ಒಂದು ಹೊಸ ವ್ಯವಸ್ಥೆ ರೂಪಿಸಲು ಹೊರಟ ಅವರ ಅಂತರಂಗದ ತುಡಿತಗಳು, ತಮ್ಮೊಳಗೆ ನಡೆಸಿದ ಯುದ್ಧಗಳು ಎಲ್ಲವನ್ನು ನೀವು ಓದಲಿದ್ದೀರಿ. ಅವರ ದಿನಚರಿಯ ಪುಟಗಳಲ್ಲಿ ಶಿಕ್ಷಣ ಕ್ಷೇತ್ರದ ಕೆಲವು ಜ್ವಲಂತ ಸಮಸ್ಯೆಗಳನ್ನು, ಅವುಗಳ ಬೇರುಗಳನ್ನು, ಕಬಂಧ ಬಾಹುಗಳನ್ನು ಕಾಣಬಹುದು. ಅವುಗಳಿಗೆ ಸೂಕ್ತ ಪರಿಹಾರ ಕಂಡುಕೊಳ್ಳಲು ನಮಗೆ ಕೆಲವು ತಲೆಮಾರುಗಳಷ್ಟು ಅವಧಿ ಬೇಕಾಗಬಹುದು, ಆದರೆ ನಾವು ಅವರ ದೂರದೃಷ್ಟಿಯನ್ನು, ಸಂವೇದನಾ ಶೀಲತೆಯನ್ನು ಮನಗಾಣಬೇಕು.

ಅವರ ಆಲೋಚನೆಗಳಲ್ಲಿನ ಸ್ಪಷ್ಟತೆ, ಉದ್ದೇಶಗಳಲ್ಲಿನ ನಿಸ್ವಾರ್ಥತೆ ಪ್ರತಿಯೊಬ್ಬರ ಮೇಲೂ ಪ್ರಭಾವ ಬೀರುತ್ತದೆ ಹಾಗೂ ಅವರು ಇಚ್ಛಿಸಿದ ವ್ಯವಸ್ಥೆಯನ್ನು ಅಸ್ತಿತ್ವಕ್ಕೆ ತರಲು ಪ್ರೇರೇಪಿಸುತ್ತದೆ ಎಂದು ಆಶಿಸುತ್ತೇನೆ.

**– ಅನಂತ ಗಂಗೋಲ**





## 10–ಏಪ್ರಿಲ್–2007

ಇಂದು ನಾನು ನ್ಯಾಯ ಪಂಚಾಯತ್ ಸಂಪನ್ಮೂಲ ಕೇಂದ್ರದ (ಎನ್.ಪಿ.ಆರ್.ಸಿ) ಮಾಸಿಕ ಸಭೆಗೆ ಹಾಜರಾಗಿದ್ದೆ. ಇಂಥ ದಿನಗಳಲ್ಲಿ ಶಾಲೆಗೆ ರಜೆ ನೀಡುವುದು ಅನಿವಾರ್ಯವಾಗಿತ್ತು. ಎನ್.ಪಿ.ಆರ್.ಸಿ ಮಾಸಿಕ ಸಭೆಗಳು ಹಾಸ್ಯಾಸ್ಪದವಾಗಿರುವುದು ಮಾತ್ರವಲ್ಲ ಒಂದು ರೀತಿ ಶಿಕ್ಷಕರ ಸಮಯ ವ್ಯರ್ಥ ಮಾಡಲು ನಡೆಸುವ ಸಭೆಗಳಾಗಿವೆ. ಇಂದು ಎನ್.ಪಿ.ಆರ್.ಸಿ ಸಂಯೋಜಕರಾದ ಶ್ರೀ ಭಿಷ್ಟ್‌ರವರು ಬಂದಿರಲಿಲ್ಲ. ಶಿಕ್ಷಕರೂ ಪ್ರಾಥಮಿಕ ಶಾಲಾ ಶಿಕ್ಷಕರ ಘಟಕದ ವ್ಯವಸ್ಥಾಪಕರೂ ಆದ ಶ್ರೀ ದೇವೇಂದ್ರರವರು ಪ್ರಭಾರಿ ಸಂಯೋಜಕರಾಗಿದ್ದರು. ಅವರ ಬಳಿ ನಮಗೆ ತಲುಪಿಸಬೇಕಾದ ಎರಡು ಸುತ್ತೋಲೆಗಳಿದ್ದವು. ಸಭೆಗೆ ಅರ್ಧದಷ್ಟು ಶಿಕ್ಷಕರು ಮಾತ್ರ ಹಾಜರಾಗಿದ್ದರು. ಉಳಿದ ಶಾಲೆಗಳಿಗೆ ಆ ಸುತ್ತೋಲೆಗಳನ್ನು ತಲುಪಿಸುವ ವ್ಯವಸ್ಥೆ ಮಾಡಿ ಸಭೆಗೆ ಇತಿಶ್ರೀ ಹಾಡಿದರು.

ಸೂಕ್ತ ವಾತಾವರಣ ನಿರ್ಮಿಸಿದರೆ ಖಂಡಿತವಾಗಿ ಈ ಸಭೆಗಳು ಶಿಕ್ಷಕರಿಗೆ ಬಹಳ ಉಪಯುಕ್ತವಾಗುತ್ತವೆ. ನಾವೆಲ್ಲಾ ಸೇರಿ ದಿನನಿತ್ಯದ ಬೋಧನಾ ಪ್ರಕ್ರಿಯೆಯಲ್ಲಿ ಎದುರಾಗುವ ಪ್ರಮುಖ ಸಮಸ್ಯೆಗಳನ್ನು ಚರ್ಚಿಸಿ ಪರಿಹಾರ ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಸಾಮಾನ್ಯವಾಗಿ ಮುಖ್ಯೋಪಾಧ್ಯಾಯರು/ ಪ್ರಭಾರಿ ಮುಖ್ಯೋಪಾಧ್ಯಾಯರು ಇಂತಹ ಸಭೆಗಳಲ್ಲಿ ಭಾಗವಹಿಸುತ್ತಾರೆ. ಉತ್ತಮ ಹಾಗೂ ಧನಾತ್ಮಕ ರೀತಿಯಲ್ಲಿ ಚರ್ಚೆಗೆ ಅನುವಾಗುವಂತೆ ಸೂಕ್ತ ವಾತಾವರಣ ನಿರ್ಮಿಸಿದರೆ ಸಹಶಿಕ್ಷಕರು ಸಹ ತಿಂಗಳಲ್ಲಿ ಒಂದು ಬಾರಿ ಎನ್.ಪಿ.ಆರ್.ಸಿ ಮಟ್ಟದ ಸಭೆಗಳಲ್ಲಿ ಪಾಲ್ಗೊಳ್ಳಲು ಅವಕಾಶ ದೊರೆಯುತ್ತದೆ. ಇದೆಲ್ಲಾ ಎನ್.ಪಿ.ಆರ್.ಸಿ ಸಂಯೋಜಕರ ಸಂಯೋಜನಾ ಕೌಶಲವನ್ನು ಅವಲಂಬಿಸಿರುತ್ತದೆ. ಬಹುಶಃ ಕೆಲವು ಎನ್.ಪಿ.ಆರ್.ಸಿ. ಗಳಲ್ಲಿ ಇಂತಹ ಉಪಯುಕ್ತ ಸಭೆಗಳು ನಡೆಯುತ್ತಿರಬಹುದು.

## 16–ಏಪ್ರಿಲ್–2007

ಇಂದು ನಾನು ಅರ್ಧ ಗಂಟೆ ತಡವಾಗಿ ಶಾಲೆಗೆ ಹೋದೆ. ಆ ವೇಳೆಗಾಗಲೇ ಮಕ್ಕಳು ಪ್ರಾರ್ಥನೆಯನ್ನು ಮುಗಿಸಿ, ಮೈದಾನದಲ್ಲಿ ತರಗತಿವಾರು ಕುಳಿತಿದ್ದರು. 1, 2 ಮತ್ತು 3ನೆಯ ತರಗತಿ ಮಕ್ಕಳು ಸ್ವಯಂ ಸೇವಕ ಶಿಕ್ಷಕಿ ಶ್ರೀಮತಿ ಪ್ರತಿಭಾರವರ ಮಾರ್ಗದರ್ಶನದಲ್ಲಿ ತಮ್ಮ ನೋಟ್ ಪುಸ್ತಕಗಳಲ್ಲಿ ಏನನ್ನೊ ಬರೆಯುತ್ತಿದ್ದರು.

ಇಂದಿನಿಂದ ನಾನು ಒಬ್ಬ ಸ್ವಯಂ ಸೇವಕ ಶಿಕ್ಷಕಿಯನ್ನು ವ್ಯವಸ್ಥೆ ಮಾಡಿದ್ದೇನೆ. ಅವರಿಗೆ ನಾನೇ ಗೌರವಧನ ನೀಡುತ್ತೇನೆ.

ಕಳೆದ 15 ದಿನಗಳಿಂದ ಬಹುವರ್ಗ ಬೋಧನೆ ತುಂಬಾ ಅಪ್ರಾಯೋಗಿಕವಾದುದು ಎಂಬ ಭಾವನೆ ಮೂಡುತ್ತಿದೆ. ಸೈದ್ಧಾಂತಿಕವಾಗಿ ಬಹುವರ್ಗ ಬೋಧನೆ ತುಂಬಾ ಸರಳವಾಗಿ, ಆಕರ್ಷಣೀಯವಾಗಿಯೂ ಕಾಣುತ್ತದೆ. ಪ್ರಾಯೋಗಿಕವಾಗಿ ಅದು ಅಷ್ಟೇ ಕ್ಲಿಷ್ಟವಾದುದು ಹಾಗೂ ಶಿಕ್ಷಕರಿಗೆ ಶ್ರಮದಾಯಕವೂ ಅಗಿದೆ. ಒಂದು ವೇಳೆ ಮಕ್ಕಳು ಅಯಾ ತರಗತಿ ಮಟ್ಟಕ್ಕೆ ಅನುಗುಣವಾಗಿ ಸಾಮರ್ಥ್ಯಗಳಿಸಿರದಿದ್ದರೆ ಪರಿಸ್ಥಿತಿ ಮತ್ತಷ್ಟು ಜಟಿಲಗೊಳ್ಳುತ್ತದೆ. ಬಹುವರ್ಗ ಬೋಧನೆಯಲ್ಲಿನ ಏಕತಾನತೆಯನ್ನು ಹೋಗಲಾಡಿಸಲು ಆಗಾಗ ತಿಂಗಳಲ್ಲಿ ಒಂದೆರಡು ಸಲ ಬಳಸಿಕೊಳ್ಳಬಹುದೆ ವಿನಾ ದಿನನಿತ್ಯದ ಬೋಧನೆಗೆ ಬಳಸಲಾಗುವುದಿಲ್ಲ. ಬಹುವರ್ಗ ಬೋಧನೆಗೆ ಶಿಕ್ಷಕರ ಪೂರ್ವ ತಯಾರಿಯ ಜತೆಗೆ ಮಕ್ಕಳ ಕುಂದದ ಉತ್ಸಾಹ ಹಾಗು ಸಕ್ರಿಯ ಪಾಲ್ಗೊಳ್ಳುವಿಕೆಯೂ ಅಗತ್ಯವಿದೆ. ಶಿಕ್ಷಕರು ತರಗತಿಗೆ ಬರುವ ಮುನ್ನ ಕನಿಷ್ಟ 2–4 ಗಂಟೆಗಳ ಕಾಲ ನಾಳೆಯ ತರಗತಿಗೆ ಅಗತ್ಯವಾದ ಚಟುವಟಿಕೆಗಳ ತಯಾರಿ ನಡೆಸಿದಾಗ ಮಾತ್ರ ಬಹುವರ್ಗ ಬೋಧನೆ ಯಶಸ್ವಿಯಾಗುತ್ತದೆ.

ಇಂದು ಶಾಲೆಗೆ ಮೂವರು ಪೋಷಕರು ಹಾಗೂ ಪಕ್ಕದ ಶಾಲೆಯ ಶಿಕ್ಷಕಿಯೊಬ್ಬರು ಬಂದಿದ್ದರು. ಪೋಷಕರ ಜತೆ ಸುಮಾರು ಒಂದೂವರೆ ಗಂಟೆಗಳ ಕಾಲ ವರ್ಗಾವಣೆ ಪತ್ರ ನೀಡುವುದು ಹಾಗೂ ಹೊಸ ದಾಖಲಾತಿಯ ಕುರಿತು ಚರ್ಚಿಸಿದೆ. ಈ ಅವಧಿಯಲ್ಲಿ ನನ್ನ ತರಗತಿಗಳಲ್ಲಿ ಯಾವುದೇ ಪಾಠ ಪ್ರವಚನಗಳು ನಡೆಯಲಿಲ್ಲ.

**18–ಏಪ್ರಿಲ್–2007**

ಇಂದು ಮುಂಜಾನೆಯಿಂದ ಮಳೆ ಬೀಳುತ್ತಿತ್ತು. ಹಾಗಾಗಿ ಮಕ್ಕಳು 8–20ಕ್ಕೆ ಶಾಲೆಗೆ ಬಂದರು. ಪ್ರಾರ್ಥನೆ ಮಾಡಲಿಲ್ಲ. ಸುಮಾರು 8–35ಕ್ಕೆ ಎಂದಿನಂತೆ ಶಾಲಾ ಕಾರ್ಯಗಳು ಪ್ರಾರಂಭವಾದವು. ಮಳೆಯ ಕಾರಣ ಹಾಜರಾತಿ ಕಡಿಮೆ ಇತ್ತು. 51 ಮಕ್ಕಳಲ್ಲಿ 35 ಮಕ್ಕಳು ಮಾತ್ರ ಬಂದಿದ್ದರು.

ಪ್ರತಿಭಾರವರು 1ರಿಂದ 3ನೆಯ ತರಗತಿವರೆಗೆ ನೋಡಿಕೊಳ್ಳುತ್ತಿದ್ದಾರೆ. ನಾನು 4 ಮತ್ತು 5ನೆಯ ತರಗತಿಗಳಿಗೆ ಬೋಧಿಸುತ್ತಿದ್ದೇನೆ. ನನ್ನ ತರಗತಿಗಳಲ್ಲಿರುವ 18 ಮಕ್ಕಳ ಕಲಿಕಾ ಮಟ್ಟ 2ನೆಯ ತರಗತಿ ಮಕ್ಕಳ ಮಟ್ಟದಲ್ಲಿದೆ. ಹಾಗಾಗಿ ಮೊದಲು ಭಾಷೆ(ಹಿಂದಿ), ಗಣಿತ, ಸಾಮಾನ್ಯ ಅಧ್ಯಯನ/ ವಿಜ್ಞಾನ ವಿಷಯಗಳ ಮೂಲ ಪರಿಕಲ್ಪನೆಗಳನ್ನು ಕಲಿಸಿ ನಂತರ ಮುಂದುವರೆಯಬೇಕಾಗಿದೆ.

ಗೀತಾ, ಸಂಗೀತಾ, ಶಿವಹರಿ, ಚಿತ್ರಾ, ಸುಮನ್, ಸಂತೋಷಿ, ಪ್ರತಾಪ್ ಸಿಂಗ್ ಮತ್ತು ಗಜೇಸಿಂಗ್ – ಈ ಎಂಟು ಮಕ್ಕಳು ಕಲಿಕೆಯಲ್ಲಿ ತುಂಬಾ ಹಿಂದುಳಿದಿದ್ದಾರೆ. ಇವರು ಎರಡಂಕಿ ಸಂಖ್ಯೆಗಳನ್ನೂ ಸಹ ಗುರುತಿಸಲಾರರು. ಸರಳ ಪದಗಳನ್ನೂ ಸಹ ಓದಲಾರರು.

ಎಲ್ಲಕ್ಕಿಂತ ಮೊದಲು ಅವರಲ್ಲಿ ಓದುವ ಮತ್ತು ಬರೆಯುವ ಕೌಶಲಗಳನ್ನು ಬೆಳೆಸಲು ಗಮನ ನೀಡಬೇಕಾಗಿದೆ. ಇದಕ್ಕಾಗಿ ನಾನು ಅವರು ದಿನನಿತ್ಯ ಬಳಸುವ 168 ಪದಗಳನ್ನು ಪಟ್ಟಿ ಮಾಡಿದ್ದೇನೆ. ಅವುಗಳನ್ನು 28 ಫಾಂಟ್ ಸೈಜ್‌ನಲ್ಲಿ ಎ4 ಸೈಜ್ ಹಾಳೆಯಲ್ಲಿ ಪ್ರಿಂಟ್ ತೆಗೆದು ಮಕ್ಕಳಿಗೆ ಕೊಟ್ಟು ಪ್ರತಿದಿನ ಅವುಗಳನ್ನು ಓದುವ ಅಭ್ಯಾಸ ಮಾಡಿಸುತ್ತಿದ್ದೇನೆ. ಈ ಪ್ರಯೋಗವನ್ನು 1 ಮತ್ತು 2ನೆಯ ತರಗತಿಗಳಲ್ಲೇ ಮಾಡಬೇಕಾಗಿತ್ತು ಆದರೆ ನಾನು 4–5ನೇ ತರಗತಿಗಳಲ್ಲಿ ಮಾಡುತ್ತಿದ್ದೇನೆ.

ಇಂದು ಊಟದ ವಿರಾಮಕ್ಕೆ ಮುಂಚೆ ಪಟ್ಟಿಯಲ್ಲಿನ ಪದಗಳನ್ನು ಓದಿಸಿದೆ. ಅದೇ ಪಟ್ಟಿಯಲ್ಲಿನ 30 ಪದಗಳ ಉಕ್ತಲೇಖನ ಕೊಟ್ಟೆ. ಹಾಜರಿದ್ದ 12 ಮಕ್ಕಳ ಪೈಕಿ ಒಂದು ಮಗು ಮಾತ್ರ 24 ಪದಗಳನ್ನು ಸರಿಯಾಗಿ ಬರೆಯಿತು. ಉಳಿದಂತೆ ಇಬ್ಬರು 15 ಪದಗಳನ್ನು, ಇಬ್ಬರು 9 ಪದಗಳನ್ನು, ಇಬ್ಬರು 8 ಪದಗಳನ್ನು ಸರಿಯಾಗಿ ಬರೆದಿದ್ದರು. ಒಂದು ಮಗು ಕೇವಲ ಒಂದೇ ಪದ ಸರಿಯಾಗಿ ಬರೆದಿತ್ತು. ಉಳಿದವರು ಒಂದೂ ಪದವನ್ನು ಸರಿಯಾಗಿ ಬರೆದಿರಲಿಲ್ಲ.

ಗಣಿತದಲ್ಲಿ ಮೇಲೆ ತಿಳಿಸಿದ 8 ಮಕ್ಕಳನ್ನು ಹೊರತುಪಡಿಸಿ ಉಳಿದ 10 ಮಕ್ಕಳು ಸಂಖ್ಯೆಗಳನ್ನು ಓದಲು, ಬರೆಯಲು ಹಾಗೂ ಎರಡಂಕಿ ಸಂಖ್ಯೆಗಳಲ್ಲಿ ಬಿಡಿ, ಹತ್ತರ ಸ್ಥಾನಗಳನ್ನು ಗುರ್ತಿಸಲು, ಸ್ಥಾನಬೆಲೆ ತಿಳಿಸಲು ಪ್ರಾರಂಭಿಸಿದ್ದಾರೆ.

ಇಂದು ನಾನು ಯಾವುದೇ ಮಗುವನ್ನು ಬೈಯಲಿಲ್ಲ, ಹೊಡೆಯಲಿಲ್ಲ. ತುಂಬಾ ತಾಳ್ಮೆಯಿಂದ ಅವರಿಗೆ ಪರಿಕಲ್ಪನೆಗಳನ್ನು ಅರ್ಥಮಾಡಿಸಲು ಪ್ರಯತ್ನಿಸಿದೆ. ನಾನು ಇನ್ನೂ ಹೆಚ್ಚಿನ ಶ್ರಮವಹಿಸಬೇಕಾಗಿದೆ. ಇನ್ನೂ 8 ಮಕ್ಕಳು ಮೂಲ ಪರಿಕಲ್ಪನೆಗಳನ್ನೇ ಅರ್ಥಮಾಡಿಕೊಳ್ಳುತ್ತಿಲ್ಲ. ಏನಾದರೂ ಪ್ರಶ್ನೆ ಕೇಳಿದರೆ ಸುಮ್ಮನೆ ಮಕ್ಕಳ ಮುಖ ನೋಡಿಕೊಂಡು ನಿಂತುಬಿಡುತ್ತಾರೆ. ಸುರೇಂದ್ರ, ಅತರ್ ಸಿಂಗ್, ರಮೇಶ್, ಕಮಲೇಶ್ವರಿ, ಸುನೀತ, ನೈನತೇಯಿ ಮತ್ತು ಧೃಪಾಲ ಇವರು ಮಾತ್ರ ಬೇಗ ಅರ್ಥಮಾಡಿ ಕೊಳ್ಳುತ್ತಾರೆ.



**21–ಏಪ್ರಿಲ್–2007**

ಈ ಮಕ್ಕಳು ಕಳೆದ 3–4 ವರ್ಷಗಳಿಂದ ಇದೇ ಶಾಲೆಗೆ ಬರುತ್ತಿವೆ. ಆದರೆ ನಾನು ಇವರ ಕಲಿಕೆಯ ಪ್ರಗತಿ ಬಗ್ಗೆ ಗಂಭೀರವಾಗಿ ಆಲೋಚಿಸಿ, ಕ್ರಮ ಕೈಗೊಂಡ 20 ದಿನಗಳಲ್ಲಿ ನನಗೆ ಇದು ಬೇರೆ ಶಾಲೆ, ಈ ಮಕ್ಕಳು ಬೇರೆ ಮಕ್ಕಳಿರಬೇಕು ಎಂದೆನಿಸಲು ಪ್ರಾರಂಭಿಸಿದೆ. ನನಗೆ ಇವರು ಬಹಳ ಸಮಯದಿಂದ ಇದೇ ಶಾಲೆಯಲ್ಲಿದ್ದರು ಎಂದರೆ ನಂಬಲಾಗುತ್ತಿಲ್ಲ. ಹೊಸದಾಗಿ ದಾಖಲಾದ ಮಕ್ಕಳಂತೆ ಕಾಣುತ್ತಿದ್ದಾರೆ. ಪೋಷಕರು ತಮ್ಮ ಮಕ್ಕಳು ಸರಿಯಾಗಿ ಕಲಿಯುತ್ತಿಲ್ಲವೆಂದು ಶಿಕ್ಷಕರನ್ನು ದೂರುತ್ತಿದ್ದರೆ ಅವರು ಸಂಪೂರ್ಣವಾಗಿ ಸುಳ್ಳು ಹೇಳುತ್ತಿದ್ದಾರೆ ಎನ್ನುವುದು ತಪ್ಪಾಗುತ್ತದೆ.

**1–ಮೇ–2007**

ಏಪ್ರಿಲ್ 20 ರಿಂದ 30ರ ವರೆಗೆ ಮತದಾರರ ಪಟ್ಟಿಯ ಪರಿಷ್ಕರಣೆಗಾಗಿ ಮನೆ ಮನೆಗೆ ಭೇಟಿ ನೀಡಿದ್ದೆ. ಈ ಅವಧಿಯಲ್ಲಿ ಪ್ರತಿಭಾರವರು ಶಾಲೆಯಲ್ಲಿರುತ್ತಿದ್ದರು. ಪ್ರತಿ ದಿನ ಒಂದು/ಎರಡು ಗಂಟೆ ಶಾಲೆಗೆ ಹೋಗುವುದು, ಆಡಳಿತಾತ್ಮಕ ಕೆಲಸಗಳು ಮತ್ತು ಮತದಾರರ ಪಟ್ಟಿಯ ಕೆಲಸ ಮಾಡುವುದನ್ನು ಬಿಟ್ಟರೆ ಯಾವುದೇ ರೀತಿಯ ಬೋಧನಾ ಕಾರ್ಯಗಳನ್ನು ಮಾಡಲು ಸಾಧ್ಯವಾಗಲಿಲ್ಲ.

ವಿದ್ಯಾ ಕೇಂದ್ರದ ಕಾರ್ಯಕರ್ತೆಯೊಬ್ಬರು ಈ ಅವಧಿಯಲ್ಲಿ ಶಾಲೆಗೆ ಬರುತ್ತಿದ್ದರು. ನಾನು ಗಮನಿಸಿದಂತೆ ಬೋಧನೆ ಮಾಡಲು ಆಕೆಗೆ ಆಸಕ್ತಿ ಇರಲಿಲ್ಲ. ಸುಮ್ಮನೆ ಕಪ್ಪುಹಲಗೆಯ ಮೇಲೆ "ಆರೋಗ್ಯವೇ ಭಾಗ್ಯ", "ಸದಾ ಸತ್ಯವನ್ನೇ ನುಡಿಯಬೇಕು" ಎಂಬ ವಾಕ್ಯಗಳನ್ನು ಬರೆಯುತ್ತಿದ್ದರು. ನೋಟ್ ಪುಸ್ತಕಗಳಲ್ಲಿ ಹಲವು ಬಾರಿ ಬರೆಯಲು ತಿಳಿಸಿ, ತಮ್ಮ ಸ್ವಂತ ಮಕ್ಕಳನ್ನು ನೋಡಿಕೊಳ್ಳುತ್ತಿದ್ದರು. ಈ ಹತ್ತು ದಿನಗಳಲ್ಲಿ ಮಕ್ಕಳು ಇಂತಹ ವಾಕ್ಯಗಳನ್ನು ಬರೆದಿರುವುದನ್ನು ಬಿಟ್ಟು ಮತ್ತೇನನ್ನೂ ಮಾಡಿಲ್ಲ.

ಕೇವಲ ಒಂದು ದಿನ ಶಾಲಾ ವೇಳಾಪಟ್ಟಿಯಲ್ಲಿ ವ್ಯತ್ಯಾಸವಾದರೂ ಮಗುವಿನ ಕಲಿಕೆ ಕುಂಠಿತಗೊಳ್ಳುತ್ತದೆ. ಒಂದು ವೇಳೆ ದೀರ್ಘ ಅವಧಿಯವರೆಗೆ ಮಕ್ಕಳನ್ನು ಅವರ ಪಾಡಿಗೆ ಅವರನ್ನು ಬಿಟ್ಟುಬಿಟ್ಟರೆ ಈ ಮೊದಲೇ ಕಲಿತಿದ್ದ ವಿಷಯಗಳನ್ನು ಮರೆಯುತ್ತಾರೆ, ಜತೆಗೆ ಗೃಹಕಾರ್ಯದ ಬಗ್ಗೆ ಆಸಕ್ತಿಯನ್ನೂ ಕಳೆದುಕೊಳ್ಳುತ್ತಾರೆ ಮತ್ತು ಇದರಿಂದ ಗೈರು ಹಾಜರಿ ಪ್ರಮಾಣವೂ ಹೆಚ್ಚಾಗುತ್ತದೆ.

ಈ ಹತ್ತು ದಿನಗಳಲ್ಲಿ ಹಾಜರಾತಿ ಪ್ರಮಾಣ ಶೇ.50 ಕ್ಕೆ ಕುಸಿದಿತ್ತು. ಇಂದು 18 ಮಕ್ಕಳು ಮಾತ್ರ ಬಂದಿದ್ದರು. ನಾನು 4 ಮತ್ತು 5ನೆಯ ತರಗತಿಗಳಿಗೆ ಹೆಚ್ಚಿನ ಗಮನ ನೀಡುತ್ತಿದ್ದೇನೆ. ಎರಡೂ ತರಗತಿಗಳ ಮಕ್ಕಳು ಕೇವಲ 1000 ವರೆಗಿನ ಸಂಖ್ಯೆಗಳನ್ನು ಮಾತ್ರ ಗುರುತಿಸಬಲ್ಲರು. 4 ಮತ್ತು 5ನೇ ವರ್ಗದಲ್ಲಿರುವ 18 ಮಕ್ಕಳಲ್ಲಿ 7 ಮಕ್ಕಳು ಮಾತ್ರ 1000 ವರೆಗೆ ಗುರುತಿಸಬಲ್ಲರು. ಉಳಿದವರು 100 ವರೆಗಿನ ಸಂಖ್ಯೆಗಳನ್ನೂ ಸಹ ಓದಲಾರರು. ನನ್ನ ಎಲ್ಲಾ ಪ್ರಯತ್ನದ ಹೊರತಾಗಿಯೂ ಹೇಳಿಕೊಳ್ಳುವಂತಹ ಯಾವುದೇ ಪ್ರಗತಿ ಕಾಣುತ್ತಿಲ್ಲ. ನಾನು ಗುರ್ತಿಸಿದಂತೆ ಹೆಚ್ಚು ಗೈರುಹಾಜರಾಗುವ ಮಕ್ಕಳೇ ಕಲಿಕೆಯಲ್ಲಿ ಹೆಚ್ಚು ಹಿಂದುಳಿದಿದ್ದಾರೆ.

ಇಂದು ಮಕ್ಕಳು ಅಬಾಕಸ್‌ನಲ್ಲಿ ಸಂಖ್ಯೆಗಳನ್ನು ಎಣಿಸುವ/ಗುರ್ತಿಸುವುದನ್ನು ಅಭ್ಯಾಸ ಮಾಡಿದರು. ಅಬಾಕಸ್‌ನಲ್ಲಿ ಮಕ್ಕಳು ತುಂಬಾ ವೇಗವಾಗಿ ಕಲಿಯುತ್ತಾರೆ. ನಾನು ಅಬಾಕಸ್‌ನಲ್ಲಿ ಕೂಡುವ ವಿಧಾನವನ್ನು ಹೇಳಿಕೊಟ್ಟೆ.

**4–ಮೇ–2007**

ಇಂದು ಹಳ್ಳಿಯಲ್ಲಿ ಭಾಗವತ ಪಠಣ ಇದ್ದ ಕಾರಣ ಹಾಜರಾತಿ ತುಂಬಾ ಕಡಿಮೆಯಿತ್ತು.

**7-ಮೇ-2007**

ಇಂದಿನಿಂದ ಎನ್.ಪಿ.ಆರ್.ಸಿ. ಕೇಂದ್ರ, ಬೇಟಿಯಾರ (ಸ್ಥಳ. R.E.K. ಧೌಂತರಿ) ದಲ್ಲಿ ಆಯೋಜಿಸಿದ್ದ ಸೇವಾನಿರತ ಶಿಕ್ಷಕರ ಸಾಮರ್ಥ್ಯ ಅಭಿವೃದ್ಧಿ ತರಬೇತಿ ಶಿಬಿರಕ್ಕೆ ಹಾಜರಾಗಿದ್ದೆ. ಮೊದಲ ದಿನದ ತರಬೇತಿ ಕೇವಲ ಔಪಚಾರಿಕವಾಗಿತ್ತು.

ವಾಸ್ತವದಲ್ಲಿ ಇಂತಹ ಎಲ್ಲಾ ತರಬೇತಿಗಳು ಔಪಚಾರಿಕವೇ ಆಗಿವೆ. ಸಾಮಾನ್ಯವಾಗಿ ಇಂತಹ ತರಬೇತಿಗಳಲ್ಲಿ ಹಿರಿಯ ಮುಖ್ಯ ತರಬೇತುದಾರರು (Senior Master Trainer) ಮಾತನಾಡುತ್ತಿರುತ್ತಾರೆ, ಉಳಿದವರು ನಿಶ್ಯಬ್ದವಾಗಿ ಕುಳಿತು ಕೇಳಿಸಿ ಕೊಳ್ಳುತ್ತಿರುತ್ತಾರೆ. ತರಬೇತುದಾರರು ಇತರೆ ಶಿಕ್ಷಕರಿಗೆ ಮಾತನಾಡುವ ಅವಕಾಶವನ್ನೇ ನೀಡುವುದಿಲ್ಲ. ಇದಕ್ಕೆ ಒಂದು ವಿಶೇಷ ಅಷ್ಟೇ ಆಶ್ಚರ್ಯಕರವೂ ಆದ ಕಾರಣವಿದೆ. ಈ ಮುಖ್ಯ ತರಬೇತುದಾರ ಒಬ್ಬ 'ವಿದ್ವಾಂಸ'! ಅಲ್ಲದೇ ಅಪಾರ ಅನುಭವವುಳ್ಳವರು! ಅಷ್ಟೇ ಅಲ್ಲದೇ ಡಿ.ಪಿ.ಇ.ಪಿ ಯೋಜನೆ ಅಡಿಯಲ್ಲಿ ಅನೇಕ ಶಿಕ್ಷಕರಿಗೆ ತರಬೇತಿ ನೀಡಿದ್ದಾರೆ. ಹಾಗಾಗಿ ಅವನನ್ನು ಏನೂ ಪ್ರಶ್ನಿಸುವಂತಿಲ್ಲ.

ಇನ್ನು ಎರಡನೇ ಮುಖ್ಯ ತರಬೇತುದಾರ (Master Trainer) ನ್ಯಾಯ ಪಂಚಾಯತ್ ಸಂಯೋಜಕರ ಹಿಂಬಾಲಕ. ಅವರು ಚರ್ಚೆಗಳಲ್ಲೆಲ್ಲಾ ಸಂಯೋಜಕರ ಪರ ವಹಿಸುತ್ತಾರೆ, ಅವರ ಪರವಾಗಿಯೇ ಮಾತನಾಡುತ್ತಾರೆ. ಇದೇ ಕಾರಣಕ್ಕಾಗಿ ಅವರನ್ನು ರಸ್ತೆ ಪಕ್ಕದಲ್ಲೇ ಇರುವ ಶಾಲೆಗೆ ನೇಮಿಸಿದ್ದಾರೆ. ಈ ಮುಂಚೆ ಅವರು ರಸ್ತೆಯಿಂದ 5ಕಿ.ಮೀ. ದೂರವಿರುವ ಒಂದು ಜೂನಿಯರ್ ಹೈಸ್ಕೂಲ್‌ನಲ್ಲಿ ಕಾರ್ಯ ನಿರ್ವಹಿಸುತ್ತಿದ್ದರು. ಇದೇ ಮೊದಲ ಬಾರಿಗೆ ಅದೂ ನ್ಯಾಯ ಪಂಚಾಯತ್ ಸಂಯೋಜಕರ ಕೃಪೆಯಿಂದ ಮುಖ್ಯ ತರಬೇತುದಾರರಾಗಿ ನೇಮಕಗೊಂಡಿದ್ದಾರೆ. ಹಾಗಾಗಿ ಯಾವುದೇ ಉದ್ದೇಶವಿಲ್ಲದೆ, ಅನವಶ್ಯಕವಾಗಿ, ಅಪ್ರಾಸಂಗಿಕವಾಗಿ ಕೇವಲ ತೋರ್ಪಡಿಕೆಗಾಗಿ ಮಾತನಾಡಲು ಮುಂದಾಗುತ್ತಾರೆ.



## ನನ್ನ ನೋಡಿ ಅವು ಹಾರಿ ಹೋಗುವುದೇಕೆ?

ನನ್ನ ಮನೆಯ ಮುಂದೊಂದು ಮರವಿದೆ
ಅದರೊಳು ಹಕ್ಕಿಯೊಂದು ಗೂಡಕಟ್ಟಿದೆ
ಮೊಟ್ಟೆಯಿಟ್ಟು ಕಾವು ಕೊಟ್ಟು
ಮೂರು ಮರಿಯ ಮಾಡಿವೆ.

ನನ್ನ ನೋಡಿ ಮರಿಗಳು ತಲೆಯೆತ್ತಿ ನೋಡುತಿದ್ದವು
ಗೂಡಿನಿಂದ ಮುಖ ಇಣಿಕಿಸಿ ಪದೇ ಪದೇ ನನ್ನೊಡನೆ
ಕಣ್ಣಾ ಮುಚ್ಚಾಲೆ ಆಡುತಿದ್ದವು.

ಮರಿಗಳೀಗ ದೊಡ್ಡವಾಗಿವೆ
ಅಲ್ಲಿಗಿಲ್ಲಿಗೆ ಚಂಗುಚಂಗನೆ ನೆಗೆಯುತ್ತವೆ
ಆದರೂ ಅಚ್ಚರಿ ತುಂಬಿದ ಕಂಗಳಿಂದ
ಆಗಾಗ ನನ್ನಡೆಗೆ ನೋಡುತ್ತವೆ.

ಆದರಿವು ಬದಲಾದದ್ದೆಂದು?
ಈ ಹಕ್ಕಿಗಳೀಗ ಬಹುದೂರ ಹಾರುತ್ತವೆ
ಮರಳಿ ಗೂಡಿಗೆ ಮರುಳುತ್ತವೆ
ಅಚ್ಚರಿಯಾಗಿದೆ ನನಗೆ
ನಾನು ಹತ್ತಿರ ಹೋದೊಡನೆ
ಅವು ಹಾರಿ ಹೋಗುವುದೇಕೆ?

### 13-ಜುಲೈ-2007

ಇಂದು ನಾನು ಬಿ. ಆರ್. ಸಿ ಡುಂಡದಲ್ಲಿ ತರಬೇತಿಯಲ್ಲಿ ಭಾಗವಹಿಸಿದ್ದೆ. ಹಿಂದಿನ ತರಬೇತಿಗೆ ಹಾಜರಾಗದಿದ್ದ ಶಿಕ್ಷಕರಿಗೆ ಈ ತರಬೇತಿ ಆಯೋಜಿಸಲಾಗಿತ್ತು. ತರಬೇತಿಗೆ 32 ಶಿಕ್ಷಕರು ಹಾಜರಾಗಿದ್ದರು. 'ಪಠ್ಯಪುಸ್ತಕದಲ್ಲಿನ ಕ್ಲಿಷ್ಟಾಂಶಗಳು' ಎಂಬುದು ತರಬೇತಿಯ ವಿಷಯ. ಇದರಲ್ಲಿ ಭಾಷೆ (ಹಿಂದಿ), ಇಂಗ್ಲೀಷ್, ಸಂಸ್ಕೃತ, ಗಣಿತ, ವಿಜ್ಞಾನ ಮತ್ತು ಸಮಾಜ ವಿಜ್ಞಾನ ವಿಷಯಗಳು ಸೇರಿದ್ದವು. ಜೂನಿಯರ್ ಹೈಸ್ಕೂಲ್‌ನ ಸಹ ಶಿಕ್ಷಕರಾದ ಶ್ರೀ ಬಿಷ್ಟ್‌ರವರು ತರಬೇತುದಾರರಾಗಿದ್ದರು. ಎಲ್ಲಾ ವಿಷಯಗಳಿಗೂ ಅವರೊಬ್ಬರೇ ಸಂಪನ್ಮೂಲ ವ್ಯಕ್ತಿಯಾಗಿದ್ದರು. ಅವರು ಶಾಲೆಯಲ್ಲಿ ವಿಜ್ಞಾನ ಮತ್ತು ಗಣಿತ ಬೋಧನೆ ಮಾಡುತ್ತಿದ್ದುದರಿಂದ ಆ ವಿಷಯಗಳನ್ನು ಅವರು ಚೆನ್ನಾಗಿ ಬಲ್ಲವರಾಗಿದ್ದರು. ಉಳಿದ ವಿಷಯಗಳಲ್ಲಿ ಅವರಿಗೆ ಅಷ್ಟೇನೂ ಪರಿಣತಿ ಇರಲಿಲ್ಲ.

'ಪುನರಾವರ್ತಿತ ದಶಮಾಂಶಗಳು ಮತ್ತು ಅವುಗಳನ್ನು ಭಿನ್ನರಾಶಿ ರೂಪಕ್ಕೆ ಪರಿವರ್ತಿಸುವುದು' ಎಂಬ ವಿಷಯದ ಚರ್ಚೆಯೊಂದಿಗೆ ಇಂದಿನ ತರಬೇತಿ ಪ್ರಾರಂಭವಾಯಿತು. ಚರ್ಚೆ ಯಥಾಪ್ರಕಾರ ಏಕಮುಖವಾಗಿತ್ತು. ಶಿಕ್ಷಕರಿಗೆ ಚರ್ಚೆಯಲ್ಲಿ ಸಕ್ರಿಯವಾಗಿ ಭಾಗವಹಿಸಲು ಅವಕಾಶವಿರಲಿಲ್ಲ. ತರಗತಿಯಲ್ಲಿ ಮಕ್ಕಳಿಗೆ ಪಾಠ ಬೋಧಿಸುವಂತೆ ಕಪ್ಪು ಹಲಗೆ ಮೇಲೆ ಗಣಿತದ ಲೆಕ್ಕಗಳನ್ನು ಬಿಡಿಸುತ್ತಾ ವಿವರಣೆ ಕೊಡುತ್ತಿದ್ದರು. ಶಿಕ್ಷಕರು ನಿಷ್ಕ್ರಿಯ ಶ್ರೋತೃಗಳಂತೆ ಕೇಳುತ್ತಿದ್ದರು. ಕೆಲವರು ಅದೂ ಮಾಡದೆ ತಮ್ಮ ಪಾಡಿಗೆ ತಾವು ಮಾತನಾಡಿಕೊಳ್ಳುತ್ತಿದ್ದರು.

ಕೆಲವು ದಿನಗಳ ಹಿಂದೆ ಡಯಟ್ ವತಿಯಿಂದ ಮುಖ್ಯ ತರಬೇತುದಾರರಿಗೆ ಒಂದು ತರಬೇತಿ ಆಯೋಜಿಸಿದ್ದರು. ಇಲ್ಲಿಗೆ ಹೋಲಿಸಿದರೆ ಆ ತರಬೇತಿ ಉತ್ತಮವಾಗಿತ್ತು. ಅಲ್ಲಿ ಭಾಗವಹಿಸಿದ್ದವರು ತುಂಬಾ ಕ್ರಿಯಾಶೀಲರಾಗಿದ್ದರು ಹಾಗೂ ಕಲಿಯಲು ಉತ್ಸಾಹಿಗಳಾಗಿದ್ದರು. ಸಮಾಧಾನವಾಗಿ ಕೇಳಿಸಿಕೊಳ್ಳುತ್ತಿದ್ದರು ಮತ್ತು ಸೂಕ್ತವಾಗಿ ಪ್ರತಿಕ್ರಿಯಿಸುತ್ತಿದ್ದರು. ಒಂದು ವೇಳೆ ತರಬೇತುದಾರರು ತರಬೇತಿ ನೀಡಲು ಬರುವ ಮುನ್ನ ಮನೆಯಲ್ಲಿ ಸೂಕ್ತ ಪೂರ್ವ ಸಿದ್ಧತೆ ಮಾಡಿಕೊಂಡು ಬಂದರೆ ತರಬೇತಿಗಳು ಹೆಚ್ಚು ಆಸಕ್ತಿದಾಯಕವಾಗಿರುತ್ತವೆ. ಸಾಮಾನ್ಯವಾಗಿ ಶಿಕ್ಷಕರು ಪಠ್ಯಪುಸ್ತಕಕ್ಕೆ ಜೋತುಬೀಳುವ ಹಾಗೆ ಇಲ್ಲೂ ಸಹ ತರಬೇತುದಾರರು ತಮಗೆ ನೀಡಿರುವ ಪಠ್ಯವಸ್ತುವನ್ನು ಬಿಟ್ಟು ಮತ್ತೇನನ್ನೂ ತಿಳಿಸುವ ಸಾಹಸಕ್ಕೆ ಕೈ ಹಾಕಲಿಲ್ಲ.

ಅಪವರ್ತನ ವಿಧಾನ ಮತ್ತು ಭಾಗಾಕಾರ ವಿಧಾನದಿಂದ ಮ.ಸಾ.ಅ ಮತ್ತು ಲ.ಸಾ.ಅ ಕಂಡು ಹಿಡಿಯುವುದನ್ನು ತಿಳಿಸುವುದರೊಂದಿಗೆ ಇಂದಿನ ತರಬೇತಿ ಮುಕ್ತಾಯವಾಯಿತು.

ನನಗೆ ಈ ಮ.ಸಾ.ಅ ಮತ್ತು ಲ.ಸಾ.ಅ ನಂತಹ ಪದಗಳು ಸದಾ ಗೊಂದಲವನ್ನುಂಟು ಮಾಡುತ್ತಿವೆ. ನಾನು ಎಂದೂ ನನ್ನ ತರಗತಿಯ ಮಕ್ಕಳಿಗೆ ಮ.ಸಾ.ಅ ಮತ್ತು ಲ.ಸಾ.ಅ ಗಳನ್ನು ಬೋಧಿಸಿಲ್ಲ. ಕಾರಣ ಅವರು ಎಂದೂ ಆ ಮಟ್ಟವನ್ನು ತಲುಪಿಲ್ಲ. 5ನೇ ತರಗತಿಯಲ್ಲಿಯೂ ಸಹ ನಾವು ವ್ಯವಕಲನವನ್ನು ದಾಟಿ ಮುಂದೆ ಹೋಗಿಲ್ಲ.

### 28-ಜುಲೈ-2007

ಇಂದು ಶಾಲೆಯಲ್ಲಿ ಪೋಷಕರ ಸಭೆ ಕರೆಯಲಾಗಿತ್ತು. ನಿನ್ನೆ "ಸಭೆ 10 ಗಂಟೆಗೆ ಪ್ರಾರಂಭವಾಗುತ್ತದೆ, ನಿಮ್ಮ ಪೋಷಕರನ್ನು 10 ಗಂಟೆಗೆ ಬರಲು ತಿಳಿಸಿ" ಎಂದು ಹೇಳಿ ಕಳುಹಿಸಿದ್ದರೂ ಕೆಲವರು ಬೆಳಿಗ್ಗೆ 8 ಗಂಟೆಗೆ ಬರಲು ಆರಂಭಿಸಿದರು. ಮೊದಲು ಬಂದವರು ಇಬ್ಬರು ತಾಯಂದಿರು. ಅವರು "ನಾವು ದನಗಳನ್ನು ಕಾಯಲು ದೂರದ ತಾಂಡಾದವರೆಗೂ ಹೋಗಬೇಕು, ನಮ್ಮನ್ನು ಬೇಗ ಕಳುಹಿಸಿಕೊಡಿ" ಎಂದರು. ನಾನು ಇರುವಂತೆ ಒತ್ತಾಯ ಮಾಡಿದೆ. "ನಮ್ಮ ಕಷ್ಟ ನಿಮಗೆ ಗೊತ್ತಿಲ್ಲ, ನಮ್ಮನ್ನು ಹೋಗಲು ಬಿಟ್ಟರೆ ತುಂಬಾ ಅನುಕೂಲವಾಗುತ್ತದೆ" ಎಂದರು. ನನಗೆ ಅವರ ಜೀವನ ವಿಧಾನ, ಅವರ ಬಡತನ, ಅವರ ಕಷ್ಟದ ಅರಿವಿದ್ದುದರಿಂದ ಈ ಬಾರಿ ನಾನು ಅವರನ್ನು ಒತ್ತಾಯಿಸಲಿಲ್ಲ.

ಇದೇ ರೀತಿ ಇನ್ನೂ ನಾಲ್ಕು ಪೋಷಕರು ಬಂದರು. "ನಿಮ್ಮ ಮೇಲೆ ನಮಗೆ ಪೂರ್ತಿ ನಂಬಿಕೆಯಿದೆ. ನೀವು ಮಕ್ಕಳನ್ನು ಚೆನ್ನಾಗಿ ಹೆದರಿಸಿ, ಹೊಡೆಯಿರಿ. ಅವು ಮನೆಯಲ್ಲಿ ನಮ್ಮ ಮಾತು ಸ್ವಲ್ಪವೂ ಕೇಳುವುದಿಲ್ಲ. ಆದರೆ ನಿಮಗೆ ಭಯ ಪಡುತ್ತವೆ.



ನೀವು ಎಷ್ಟಾದರೂ ಹೊಡೆಯಿರಿ, ಬೈಯ್ಯಿರಿ, ಹೆದರಿಸಿ ನಾವು ನಿಮ್ಮನ್ನು ಕೇಳುವುದಿಲ್ಲ" ಎಂದು ಹೇಳಿ ಹೊರಟುಹೋದರು. ಪಾಪ! ಅವರಿಗೂ ಮನೆಯಲ್ಲಿ ಸಾಕಷ್ಟು ಕೆಲಸಗಳಿದ್ದವು.

9:30ಕ್ಕೆ ಸುಮಾರು 20–25 ಪೋಷಕರು, ಗ್ರಾಮ ಪ್ರಧಾನರೂ ಮತ್ತು ಸ್ಥಳೀಯ ಪಂಚಾಯ್ತಿಯ ಸದಸ್ಯರೂ ಬಂದರು. ನಾನು ನೆಲದ ಮೇಲೆ ಚೀಲಗಳನ್ನು ಹಾಸಿ ಅದರ ಮೇಲೆ ಕುಳಿತುಕೊಳ್ಳಲು ತಿಳಿಸಿದೆ. ಮಕ್ಕಳು ವರಾಂಡದ ಮುಂಭಾಗದಲ್ಲಿ ಕುಳಿತುಕೊಂಡರು. ಎಲ್ಲರನ್ನು ಸ್ವಾಗತಿಸಿದ ನಂತರ ಹೆಣ್ಣು ಮಕ್ಕಳಿಗಾಗಿ ನೀಡಿದ್ದ ಪ್ರೋತ್ಸಾಹ ಧನದಲ್ಲಿ ತಂದಿದ್ದ ಬ್ಯಾಗ್‌ಗಳು, ನೋಟ್ ಪುಸ್ತಕಗಳು, ಡ್ರಾಯಿಂಗ್ ಬಾಕ್ಸ್‌ಗಳು, ಪೆನ್ಸಿಲ್‌ಗಳು ಮತ್ತು ರಬ್ಬರ್‌ಗಳನ್ನು ವಿತರಣೆ ಮಾಡುವಂತೆ ಗ್ರಾಮ ಪ್ರಧಾನರನ್ನು ಕೋರಿದೆ. ಗ್ರಾಮ ಪ್ರಧಾನರು ಮಕ್ಕಳಿಗೆ ಅವುಗಳನ್ನು ವಿತರಿಸಿದರು.

### 1-ಆಗಸ್ಟ್-2007

ಇಂದು ಉತ್ತರಕಾಶಿಯಿಂದ ಬೆಳಿಗ್ಗೆ 7 ಗಂಟೆಗೆ ಹೊರಟು 9 ಗಂಟೆಗೆ ಶಾಲೆ ತಲುಪಿದೆ. ನಿನ್ನೆ ಅಲ್ಲಿ ಆಯೋಜಿಸಿದ್ದ ಕಲಿಕಾ ಖಾತ್ರಿ ಕಾರ್ಯಕ್ರಮದಲ್ಲಿ ಸಂಜೆ 5 ಗಂಟೆಯವರೆಗೂ ತೊಡಗಿಸಿಕೊಂಡಿದ್ದೆ.

ಪ್ರಶಿಕ್ಷಣಾರ್ಥಿ ಶ್ರೀಮತಿ ವಿಮಲ ಮತ್ತು ಇಬ್ಬರು ಸ್ವಯಂ ಸೇವಕ ಶಿಕ್ಷಕಿಯರು ಆ ವೇಳೆಗಾಗಲೆ ಹಾಜರಿದ್ದರು. ಅವರು ಕಾರ್ಯಾಲಯದಲ್ಲಿ ಕುಳಿತು ಪರಸ್ಪರ ಮಾತನಾಡಿಕೊಳ್ಳುತ್ತಿದ್ದರು. ನನ್ನನ್ನು ನೋಡಿ ತರಗತಿಗೆ ಹೊರಡಲು ಸಿದ್ಧರಾದರು. ಮಕ್ಕಳು ನಿಶ್ಯಬ್ದರಾಗಿ ತಮ್ಮ ತರಗತಿಗಳಲ್ಲಿ ಕುಳಿತುಕೊಂಡಿದ್ದರು. ಅಡುಗೆಯವರು ಬಂದು ಅಡುಗೆ ಸಿದ್ಧತೆ ಮಾಡಿಕೊಳ್ಳುತ್ತಿದ್ದರು.

ನಾವು ನಾಲ್ವರು ಯಾರು, ಯಾವ ತರಗತಿಗೆ ಯಾವ ವಿಷಯ ಬೋಧಿಸಬೇಕು ಎಂದು ಚರ್ಚಿಸಿ ವಿಷಯ ಮತ್ತು ತರಗತಿಗಳನ್ನು ಹಂಚಿಕೊಂಡೆವು. ಮಕ್ಕಳನ್ನು ನಾಲ್ಕು ಗುಂಪುಗಳಲ್ಲಿ ಕುಳಿತುಕೊಳ್ಳುವಂತೆ ವ್ಯವಸ್ಥೆ ಮಾಡಲಾಯಿತು.

ಮಧ್ಯಾಹ್ನದ ಊಟದ ನಂತರ ಮೂವರು ಅವರವರ ತರಗತಿಗಳಿಗೆ ಹೋದರು. ನನ್ನ ತರಗತಿ ಕೋಣೆಯಲ್ಲಿ ಮರಳು ಮತ್ತು ಶಾಲೆಯಲ್ಲಿನ ಇತರೆ ಹಳೆಯ ವಸ್ತುಗಳು ಇದ್ದುದರಿಂದ ಮಕ್ಕಳ ಸಹಾಯದಿಂದ ಅವುಗಳನ್ನು ತೆಗೆದು ಸ್ವಚ್ಛಗೊಳಿಸಿದೆ.

ಇಂದು ನಾನು ಏನನ್ನೂ ಬೋಧಿಸಲಿಲ್ಲ. ಕೇವಲ 3ನೇ ತರಗತಿಯ ಪರಿಸರ ಅಧ್ಯಯನದಲ್ಲಿ ಈ ಮುಂಚೆ ಬೋಧಿಸಿದ್ದ ಪಾಠದ ಪುನರಾವರ್ತನೆ ಮಾಡಿದೆ. ನಾನು ಇದುವರೆಗೆ ಈ ಪಾಠದಲ್ಲಿ ಏನೇನು ಕಲಿತಿದ್ದೀರಿ ಎಂದು ಕೇಳಿದ್ದಕ್ಕೆ ಕೇವಲ ಇಬ್ಬರು ಮಾತ್ರ ಸರಿಯಾದ ಉತ್ತರ ನೀಡಿದರು. ಕೆಲವರು ಸಜೀವ ವಸ್ತುಗಳು ಮತು ನಿರ್ಜೀವ ವಸ್ತುಗಳು, ದೇವರು ಮಾಡಿದ ವಸ್ತುಗಳು ಮತ್ತು ಮನುಷ್ಯ ಮಾಡಿದ ವಸ್ತುಗಳು ಎಂದು ಉತ್ತರಿಸಿದರು, ಉಳಿದವರು ಕುರ್ಚಿ, ಪುಸ್ತಕ, ಮನುಷ್ಯ, ಎತ್ತು ಇತ್ಯಾದಿಯಾಗಿ ವಸ್ತುಗಳ ಹೆಸರನ್ನು ಹೇಳಿದರು.

ನಾನು ಮೂರು ದಿನಗಳ ಕಾಲ 'ಚಂದನ್' ಎಂಬ ಪಾಠವನ್ನು ಬೋಧಿಸಿದೆ. ಇದರಲ್ಲಿ ಮಾನವ ನಿರ್ಮಿತ ವಸ್ತುಗಳು, ಪ್ರಾಕೃತಿಕ ವಸ್ತುಗಳು, ಸಜೀವಿಗಳು ಮತ್ತು ನಿರ್ಜೀವಿಗಳ ಬಗ್ಗೆ ತಿಳಿಸಿದೆ ಮತ್ತು ಮಕ್ಕಳಲ್ಲಿ ಅವುಗಳ ಪರಿಕಲ್ಪನೆಯನ್ನು ಬೆಳೆಸುವ ಪ್ರಯತ್ನ ಮಾಡಿದೆ.

ಇದ್ದ 20 ಮಕ್ಕಳಲ್ಲಿ 16 ಮಕ್ಕಳಿಂದ 'ಪ್ರಾಕೃತಿಕ' ಎಂಬ ಪದವನ್ನು ಸರಿಯಾಗಿ ಉಚ್ಚರಿಸುವಂತೆ ಮಾಡಲು ನನ್ನಿಂದ ಸಾಧ್ಯವಾಗಲಿಲ್ಲ. ಅದು ಮಾತೃಭಾಷೆಯ ಪ್ರಭಾವ (ಅದು ಹಿಂದಿ ಪದ, ಅವರ ಮಾತೃಭಾಷೆ ಗಢವಾಲಿ) ದಿಂದ ಎಂದು ಗೊತ್ತಿದ್ದರೂ ಇಂತಹ ಸಂದರ್ಭಗಳಲ್ಲಿ ನಾನು ತುಂಬಾ ಉದ್ವೇಗಕ್ಕೊಳಗಾಗುತ್ತಿದ್ದೆ. ಆದರೆ ನನಗೆ ಗೊತ್ತಿತ್ತು ನಾನು ಹೇಳುತ್ತಿರುವುದು ಅವರಿಗೆ ಅರ್ಥವಾಗುತ್ತಿದೆ. ನಾನು ಪ್ರಶ್ನೆ ಕೇಳಿದಾಗ ಅವರು ಸರಿಯಾದ ಉತ್ತರ/ಉದಾಹರಣೆ ನೀಡುತ್ತಿದ್ದರು. ಅವರಿಗೆ ತಮ್ಮ ಪರಿಸರದಲ್ಲಿ ಹಿಂದಿ ಪದಗಳನ್ನು ಕೇಳಲಾಗಲಿ, ಮಾತನಾಡಲಾಗಲಿ ಅವಕಾಶಗಳಿರಲಿಲ್ಲ. ಆದ್ದರಿಂದ ಹಿಂದಿ ಪದಗಳನ್ನು ಸರಿಯಾಗಿ ಉಚ್ಚರಿಸಲು ಮತ್ತು ನೆನಪಿಟ್ಟುಕೊಳ್ಳಲು ಪ್ರಯಾಸಪಡುತ್ತಿದ್ದರು.

ಸರಿಯಾಗಿ 1 ಗಂಟೆಗೆ ಮಕ್ಕಳನ್ನು ಮನೆಗೆ ಬಿಟ್ಟೆ. ಇಂದು ನನ್ನ ಸಮಯವೆಲ್ಲಾ ಕೊಠಡಿಗಳನ್ನು ವ್ಯವಸ್ಥೆಗೊಳಿಸಲು ಕಳೆದುಹೋಯಿತು.

ಮನೆಗೆ ಬಂದು ಊಟ ಮಾಡಿ 3 ಗಂಟೆವರೆಗೂ ವಿಶ್ರಾಂತಿ ಪಡೆದೆ. 3 ಗಂಟೆಯಿಂದ 4 ಗಂಟೆವರೆಗೆ 2ನೇ ತರಗತಿ ಮಕ್ಕಳಿಗಾಗಿ ಒಂದು ಕಥೆಯನ್ನು ಟೈಪ್ ಮಾಡಿ ಪ್ರಿಂಟ್ ತೆಗೆದು ಲ್ಯಾಮಿನೇಷನ್ ಮಾಡಿಸಿದೆ. ಅವರಿಗೆ ಇನ್ನೂ ಸರಿಯಾಗಿ ವರ್ಣಮಾಲೆಯ ಅಕ್ಷರಗಳನ್ನೂ ಗುರ್ತಿಸಲು ಬರುವುದಿಲ್ಲ. ಈ 'ಎರಡು ಮೇಕೆಗಳು' ಕಥೆಯ ಮೂಲಕವಾದರೂ ಅವರಿಗೆ ಓದುವ ಅಭ್ಯಾಸ ಮಾಡಿಸುತ್ತೇನೆ. 4 ಗಂಟೆಗೆ ವಿದ್ಯಾಮಂದಿರದ ಶಿಕ್ಷಕರೊಬ್ಬರು ಬಂದರು. ಅವರಿಗೆ ಸುಮಾರು ಒಂದು ಗಂಟೆ ಕಂಪ್ಯೂಟರ್ ಹೇಳಿಕೊಟ್ಟೆ. ನಂತರ ಅವರೊಡನೆ ಮಾರ್ಕೆಟ್‌ಗೆ ಹೋದೆ.

ರಾತ್ರಿ 8–30 ರಿಂದ 10 ಗಂಟೆಯವರೆಗೆ ದಿನಚರಿ ಬರೆದೆ. ನಂತರ ಅರ್ಧ ಗಂಟೆ ಆಗಸ್ಟ್ ತಿಂಗಳ 'ಕದಂಬಿನಿ' ಮಾಸಪತ್ರಿಕೆ ಓದಿ 10–30ಕ್ಕೆ ಮಲಗಿದೆ.

## 6–ಆಗಸ್ಟ್–2007

ಇಂದು ಆಗಸ್ಟ್ 6. ಸರಿಯಾಗಿ 7–15ಕ್ಕೆ ಶಾಲೆ ತಲುಪಿದೆ. ಮಕ್ಕಳು ಸುಮಾರು 8 ಗಂಟೆಗೆ ಶಾಲೆಗೆ ಬಂದರು. 8 ಗಂಟೆಗೆ ಮಕ್ಕಳನ್ನು ಪ್ರಾರ್ಥನೆಗೆ ಸಾಲಿನಲ್ಲಿ ನಿಲ್ಲಿಸಿ ವಿಮಲ ಮತ್ತು ಬಿಂದುಲೇಶ್ (ಬಿಂದು–ಸ್ವ.ಸೇ.ಶಿ)ಗೆ ಏನು ಮಾಡಬೇಕೆಂದು ಸೂಚನೆಗಳನ್ನು ಕೊಟ್ಟು ನಾನು ಪ್ರಧಾನರ ಮನೆಗೆ ಹೊರಟೆ. ದಾರಿಯಲ್ಲಿ ಅಡುಗೆಯವರನ್ನು ಭೇಟಿಯಾದೆ. ಅವರು ಶಾಲೆ ಕಡೆಗೆ ಹೋಗುತ್ತಿದ್ದರು. ಅವರಿಗೆ ಬೇಗ ಅಡುಗೆ ಮಾಡುವಂತೆ ತಿಳಿಸಿ ಪ್ರಧಾನರನ್ನು ಭೇಟಿ ಮಾಡಲು ಹೋದೆ. ಕಾಮಗಾರಿಗೆ ಸಂಬಂಧಿಸಿದ ಕೆಲವು ಪ್ರಮುಖ ವಿಷಯಗಳನ್ನು ಅವರೊಡನೆ ಚರ್ಚಿಸಿ ಸರಿಯಾಗಿ 9–15ಕ್ಕೆ ಶಾಲೆಗೆ ಹಿಂತಿರುಗಿದೆ.

ಅಡುಗೆಯವರು ಇನ್ನೂ ಈಗ ಒಲೆ ಹಚ್ಚುತ್ತಿದ್ದರು. ಅಡುಗೆ 10 ಗಂಟೆಯೊಳಗೆ ತಯಾರಾಗಿರಬೇಕು. ಆಗ ಮಾತ್ರ ವಿಶ್ರಾಂತಿ ವೇಳೆಯಲ್ಲಿ ಮಕ್ಕಳಿಗೆ ಊಟ ನೀಡಲು ಸಾಧ್ಯವಾಗುತ್ತದೆ. ಸುಮಾರು 8–15ಕ್ಕೆ ಶಾಲೆಗೆ ಬಂದವಳು ಇನ್ನೂ ಒಲೆ ಹಚ್ಚಿರಲಿಲ್ಲ. ನನಗೆ ಬೇಸರವಾಗಿ ಸಮಯಕ್ಕೆ ಸರಿಯಾಗಿ ಬಂದು ಸಮಯಕ್ಕೆ ಸರಿಯಾಗಿ ಅಡುಗೆ ಮಾಡುವಂತೆ ತಿಳಿಸಿದೆ. ಆಕೆ ಕ್ಷಮೆ ಕೇಳುವ ಬದಲು ಎಂದಿನಂತೆ ವಾದಕ್ಕೆ ನಿಂತಳು. ನನಗೆ ವಿಪರೀತ ಸಿಟ್ಟು ಬಂದು ಬೈಯ್ಯುವವರೆಗೂ ಅವಳು ತನ್ನ ವಾದ ನಿಲ್ಲಿಸಲಿಲ್ಲ. ಒಂದು ವೇಳೆ 10 ಗಂಟೆಗೆ ಅಡುಗೆ ಆಗದಿದ್ದರೆ ಉಳಿದ ಅಡುಗೆಯನ್ನು ಮನೆಗೆ ತೆಗೆದುಕೊಂಡು ಹೋಗವಂತಿಲ್ಲ ಎಂದು ತಾಕೀತು ಮಾಡಿದೆ. ಆದರೂ ಆಕೆ 11 ಗಂಟೆಗೆ ಅನ್ನ ಮಾಡಿದಳು. ನಂತರ ಬಂದು ಬೇಳೆ ಕೇಳಿದಳು. ನನಗೆ ಸಿಟ್ಟು ಬಂದು ಬೇಳೆ ಕೊಡಲಿಲ್ಲ. ಪೋಷಕರನ್ನು ಕರೆದು ತೋರಿಸುವ ಉದ್ದೇಶದಿಂದ ಆ ಉಳಿದಿದ್ದ ಅನ್ನವನ್ನೂ ಹಾಗೆ ಇಟ್ಟೆ.

ಹೇಳಬೇಕೆಂದರೆ ಅವಳ ಈ ಬೇಜವಾಬ್ದಾರಿ ವರ್ತನೆಗಳಿಂದ ಬೇಸತ್ತು ಹೋಗಿದ್ದೇನೆ. ನಾನಷ್ಟೆ ಅಲ್ಲ ಮಕ್ಕಳು ಮತ್ತು ಪೋಷಕರೂ ಸಹ ರೋಸಿಹೋಗಿದ್ದಾರೆ. ಆದರೂ ಅವಳನ್ನು ಬದಲಾಯಿಸವುದು ಸಾಧ್ಯವಾಗಿಲ್ಲ ಕಾರಣವಿಷ್ಟೆ ಬೇರೆ ಯಾರಾದರೂ ಅವಳ ಬದಲು ಅಡುಗೆ ಮಾಡಲು ಬಂದರೆ ಅವರನ್ನು ತೀರಾ ಕೆಟ್ಟ ಪದಗಳಿಂದ ಬೈಯ್ಯುತ್ತಾಳೆ. ಹಾಗಾಗಿ ಯಾರೂ ಬರಲು ಒಪ್ಪುವುದಿಲ್ಲ. ಈ ಮಹಾತಾಯಿಗೆ ಸ್ವಂತ ಮಕ್ಕಳಿಲ್ಲ. ಮಕ್ಕಳಲ್ಲಿ ಭೇದ ಭಾವ ಮಾಡುವುದು, ಬೈಯ್ಯುವುದು, ತಡವಾಗಿ ಬರುವುದು, ಸೌದೆ/ಗ್ಯಾಸ್ ಹಾಳು ಮಾಡುವುದು, ಏನಾದರು ಹೇಳಿದರೆ ಎದುರು ಮಾತನಾಡುವುದು, ಸಮಯಕ್ಕೆ ಸರಿಯಾಗಿ ಅಡುಗೆ ಮಾಡದಿರುವುದು, ಹೀಗೆ ಒಂದಲ್ಲ ಎರಡಲ್ಲ ಅವಳ ಅವಾಂತರಗಳು. ಮಕ್ಕಳೇನಾದರೂ ಅವಳ ಮಾತು ಕೇಳದಿದ್ದರೆ ಅಥವಾ ಅಡುಗೆಗೆ ನೀರು ತಂದುಕೊಡದಿದ್ದರೆ ಕೆಟ್ಟದಾಗಿ ಬೈಯ್ಯುತ್ತಾಳೆ. ಅನವಶ್ಯಕವಾಗಿ ತರಗತಿ ಕೋಣೆಗೆ ಬಂದು, ಏನೇನೋ ಮಾತನಾಡುತ್ತಾಳೆ.

ಶಾಲೆ ಬಿಟ್ಟ ನಂತರ ಎಲ್ಲಾ ಮಕ್ಕಳಿಗೆ ತಲಾ ಎರಡೆರಡು ಸೇಬು ಕೊಟ್ಟು, ಅವರಾದರೂ ಬಂದು ಬುದ್ಧಿ ಹೇಳಲಿ ಎಂಬ ಉದ್ದೇಶದಿಂದ ನಾಳೆ ಅವರ ಪಾಲಕರನ್ನು ಕರೆತರುವಂತೆ ಹೇಳಿದೆ. ನಂತರ ಅಡುಗೆ ಕೋಣೆಯ ಕೀಲಿ ಕೇಳಿದಾಗ ಅದನ್ನು ಬಚ್ಚಿಟ್ಟು ನನ್ನನ್ನೇ ಬಯ್ಯಲು ಶುರು ಮಾಡಿದಳು.



ಇದು ಮೂರನೇ ಸಲವೋ, ನಾಲ್ಕನೇ ಸಲವೋ ಇವಳಿಗೆ ಬುದ್ಧಿ ಹೇಳುವ ಸಲುವಾಗಿ ಪಾಲಕರನ್ನು ಕರೆಸುತ್ತಿರುವುದು. ಇಂತಹ ಸನ್ನಿವೇಶಗಳು ನನಗೆ ತುಂಬಾ ಕಿರಿಕಿರಿ ಉಂಟು ಮಾಡುತ್ತಿದ್ದವು. ಈಕೆಯನ್ನು ಏನಾದರು ಮಾಡಿ ಕೆಲಸದಿಂದ ತೆಗೆದು ಹಾಕಬೇಕೆಂದು ಸಾಕಷ್ಟು ಸಲ ಅಂದುಕೊಂಡಿದ್ದೇನೆ. ಆದರೆ ಮತ್ತೆ ಅಯ್ಯೋ ಪಾಪ ಅನ್ನಿಸಿ ಸುಮ್ಮನಾಗಿದ್ದೇನೆ. ಅವಳಿಗೆ ಕೆಡುಕುಂಟು ಮಾಡುವುದು ನನಗೆ ಇಷ್ಟವಿಲ್ಲ. ನಾನು ಅವಳಿಗೆ ಸರಿಯಾಗಿ ತಿಳಿ ಹೇಳಿ ಅವಳನ್ನು ಸರಿದಾರಿಗೆ ತರಬೇಕೆಂಬುದು ನನ್ನಾಸೆ. ಅವಳು ತನ್ನನ್ನು ಸುಧಾರಿಸಿಕೊಳ್ಳಬೇಕೆಂಬುದು ನನ್ನ ಉದ್ದೇಶ.

ಪ್ರಾರಂಭದಲ್ಲಿ ಇವಳು ಅಕ್ಕಿ, ಬೇಳೆ ಮತ್ತು ಶಾಲೆಯ ಇತರೆ ವಸ್ತುಗಳನ್ನು ಕದಿಯುತ್ತಿದ್ದಳು. ಅದಕ್ಕಾಗಿ ಗ್ರಾಮ ಪ್ರಧಾನರಿಗೆ ಮತ್ತು ಶಾಲಾಭಿವೃದ್ಧಿ ಸಮಿತಿಗೆ ಕ್ಷಮಾಪಣಾ ಪತ್ರವನ್ನು ಬರೆದು ಕೊಟ್ಟಿದ್ದಾಳೆ. ಇನ್ನು ಹೀಗೆ ಮಾಡುವುದಿಲ್ಲವೆಂದು ಪ್ರಮಾಣ ಮಾಡಿದ್ದಾಳೆ. ಆದರೆ ಈಗ ಮತ್ತೆ ತನ್ನ ಹಳೇ ಚಾಳಿಯನ್ನೇ ಮುಂದುವರಿಸುತ್ತಿದ್ದಾಳೆ.

ಇವಳ ಗಲಾಟೆಯಲ್ಲೇ ಇಡೀ ದಿನ ಕಳೆದು ಹೋಯಿತು. ಮಧ್ಯಾಹ್ನದ ನಂತರ ನನಗೆ ಪಾಠ ಮಾಡುವ ಮನಸ್ಸಾಗಲಿಲ್ಲ. ಇಷ್ಟೆಲ್ಲಾ ಮಾಡಿದ್ದರೂ ತನ್ನದೇನೂ ತಪ್ಪಿಲ್ಲವೆಂದು ಅಳುತ್ತಾ ಮನೆಗೆ ಹೋದಳು. ಇವಳ ನಟನೆ ಎಂಥಾ ಕಲಾವಿದರನ್ನೂ ನಾಚಿಸುವಂತಿತ್ತು.

ನಾನು ಮನೆಗೆ ಹೋಗುತ್ತಿರುವಾಗ ಅವಳ ಮೈದುನ ಭೇಟಿಯಾದ, ಶಾಲೆಯಲ್ಲಿ ನಡೆದುದರ ಬಗ್ಗೆ ಚರ್ಚಿಸಲು ಆರಂಭಿಸಿದ. ನಾನು ಶಾಲೆಗೆ ಬಂದು ಮಾತನಾಡುವಂತೆ ತಿಳಿಸಿದೆ.

ಆದರೆ ಊಟಕ್ಕೆ ಮುಂಚೆ 4 ಮತ್ತು 5ನೇ ತರಗತಿಗಳಿಗೆ ವಿರುದ್ಧ ಪದಗಳ ಪರಿಕಲ್ಪನೆ ಉಂಟು ಮಾಡುವ ಪ್ರಯತ್ನ ಮಾಡಿದೆ. ಕೆಲವು ವಿರುದ್ಧ ಪದಗಳನ್ನು ಹೇಳಿ ಕಂಠಪಾಠ ಮಾಡಿಕೊಂಡು ಬರಲು ತಿಳಿಸಿದೆ.

3ನೇ ತರಗತಿಗೆ ಸಂಖ್ಯೆಗಳನ್ನು ಗುರ್ತಿಸುವ ಅಭ್ಯಾಸ ಮಾಡಿಸಿದೆ. 20 ಮಕ್ಕಳಲ್ಲಿ ಕೇವಲ 5 ಮಕ್ಕಳು ಮಾತ್ರ 100 ರ ವರೆಗಿನ ಸಂಖ್ಯೆಗಳನ್ನು ಗುರ್ತಿಸಬಲ್ಲರು. ಬಹುಶಃ ನಾನು ಅನುಸರಿಸುತ್ತಿರುವ ವಿಧಾನದಲ್ಲಿ ತಪ್ಪಿರಬಹುದು ಅಥವಾ ಅವರಿಗೆ ತುಂಬಾ ಕಠಿಣವೆನಿಸುತ್ತಿರಬೇಕು ಅಥವಾ ಮಕ್ಕಳು ನನಗೆ ಭಯ ಪಡುತ್ತಿರಬೇಕು ಅಥವಾ ಅವರ ಸಾಮರ್ಥ್ಯ ಅಷ್ಟೇ ಇರಬಹುದು. ಏಕೆಂದರೆ ನಾನು ಎಷ್ಟೇ ಪ್ರಯತ್ನ ಮಾಡುತ್ತಿದ್ದರೂ ನಿರೀಕ್ಷಿತ ಫಲ ದೊರೆಯುತ್ತಿಲ್ಲ. ನಾಳೆಯಿಂದ ಎರಡು ಗುಂಪುಗಳಾಗಿ ಮಾಡುತ್ತೇನೆ. ಎರಡೂ ಗುಂಪುಗಳಿಗೆ ಪ್ರತ್ಯೇಕವಾಗಿ ಹೇಳಿ ಕೊಡುತ್ತೇನೆ.

ಸತ್ಯವೇನೆಂದರೆ ನಾನು ಸಾಂಪ್ರದಾಯಿಕ ವಿಧಾನಗಳಿಂದ ಹೊರಬರಲು ಸಾಧ್ಯವಾಗುತ್ತಿಲ್ಲ. ಬಹಳ ಬೇಗ ತಾಳ್ಮೆ ಕಳೆದುಕೊಂಡು ಕೋಪಗೊಳ್ಳುತ್ತಿದ್ದೇನೆ. ಅದೇ ಕೋಪದಲ್ಲಿ ಮಕ್ಕಳನ್ನು ಹೊಡೆಯುತ್ತಿದ್ದೇನೆ. ನಂತರ ಪ್ರಶ್ಚಾತಾಪ ಪಟ್ಟು ಇನ್ನು ಮುಂದೆ ಈ ರೀತಿ ಮಾಡಬಾರದು ಎಂದುಕೊಳ್ಳುತ್ತೇನೆ. ಆದರೂ ಮತ್ತೆ ಅದನ್ನೇ ಮಾಡುತ್ತಿದ್ದೇನೆ. ಏಕಕಾಲದಲ್ಲಿ 63 ಮಕ್ಕಳನ್ನು ನೋಡಿಕೊಳ್ಳುವುದು ಒಂದು ರೀತಿ ಮಾನಸಿಕ ಹೊರೆ. ಪ್ರೀತಿಯಿಂದ ಮಾತನಾಡುವ ಸಹನೆಯನ್ನು ಪರೀಕ್ಷಿಸುತ್ತದೆ. ಎಂಥವರಿಗೂ ಸಹನೆಯ ಎಲ್ಲೆ ಮೀರುವುದು ಅನಿವಾರ್ಯವೆನಿಸುತ್ತದೆ. ವಿಮಲ ಮತ್ತು ಬಿಂದು ಸಹಾಯ ಮಾಡುತ್ತಿದ್ದರೂ ಅವರನ್ನು ನಾನು ಗಮನಿಸುತ್ತಿರಬೇಕಾಗುತ್ತದೆ ಏಕೆಂದರೆ ಅವರು ಬೋಧನೆಯಲ್ಲಿ ನನಗಿಂತ ಸಾಂಪ್ರದಾಯಿಕವಾಗಿದ್ದಾರೆ.

ಅವರು 1 ಮತ್ತು 2ನೇ ತರಗತಿಗಳಿಗೆ ಬೋಧಿಸುತ್ತಿದ್ದಾರೆ. ಮೊದಲು ಪದಗಳನ್ನು ಗುರ್ತಿಸಲು ಮತ್ತು ಓದಲು ಕಲಿಸುವಂತೆ ತಾಕೀತು ಮಾಡಿದ್ದೇನೆ. ಆದರೂ ಮಕ್ಕಳು ಅಕ್ಷರ, ಕಾಗುಣಿತ ಕಲಿಯದೇ ಓದುವುದನ್ನು ಕಲಿಯುತ್ತಾರೆ ಎಂದು ನಂಬುವುದೇ ಅವರಿಗೆ ಕಷ್ಟವಾಗಿದೆ. ಮೊದಲು ಹೀಗೆ ಹೇಳಿದಾಗ ನಾನು ಹೇಳಿದ್ದನ್ನು ಕೇಳಿ ಅವರು ನಕ್ಕರು. ನಂತರ ನಾನು ಹೇಳಿದಂತೆ ಮಾಡಲು ಒಪ್ಪಿಕೊಂಡರು. ಆಗಸ್ಟ್ 1 ರಿಂದ ಅವರು ನನ್ನೊಡನೆ ಕೆಲಸ ಮಾಡುತ್ತಿದ್ದಾರೆ. 5 ದಿನ ಕಳೆದರೂ ಯಾವುದೇ ಫಲಿತಾಂಶ ಕಾಣುತ್ತಿಲ್ಲ.

ಈ ವರ್ಷದಲ್ಲಿ ನನ್ನ ಶಾಲೆಯನ್ನು ಕಲಿಕಾ ಖಾತ್ರಿ ಶಾಲೆಯ ಪಟ್ಟಿಗೆ ಸೇರಿಸಬೇಕೆಂದು ಪಣ ತೊಟ್ಟಿದ್ದೇನೆ. ಹಲವಾರು ತೊಂದರೆಗಳ ನಡುವೆಯೂ ಈ ನಿರ್ಧಾರವೇ ನನಗೆ ನಿರಂತರವಾಗಿ ಚೈತನ್ಯವನ್ನು ನೀಡುತ್ತಿದೆ. ನಾನು ನನ್ನ ಗುರಿಯಿಂದ ವಿಮುಖನಾಗದೆ ಮತ್ತೆ ನಾಳೆಗೆ ಯೋಜನೆಗಳನ್ನು ತಯಾರಿಸುತ್ತೇನೆ.

ನಾಳೆ ಎಲ್ಲಾ ತರಗತಿಗಳ ಮಕ್ಕಳನ್ನು ಗುಂಪುಗಳಾಗಿ ವಿಂಗಡಿಸುತ್ತೇವೆ. ಗುಂಪುಗಳಲ್ಲೇ ಕಾರ್ಯನಿರ್ವಹಿಸುತ್ತೇವೆ. ಬಹುಶಃ ನಾಳಿನ ಬಹುಪಾಲು ಸಮಯ ಅಡುಗೆ ಮಾತೆಯ ವಿಚಾರದಲ್ಲೇ ಕಳೆದುಹೋಗಬಹುದೆಂದು ಅನಿಸುತ್ತಿದೆ.

## 7-ಆಗಸ್ಟ್-2007

ಇಂದು ಬೆಳಿಗ್ಗೆ 7-30ಕ್ಕೆ ಶಾಲೆ ತಲುಪಿದೆ. ಆ ವೇಳೆಗಾಗಲೆ ಕೆಲವು ಮಕ್ಕಳು ಬಂದಿದ್ದರು. ಇತ್ತೀಚೆಗೆ ಮಕ್ಕಳು ತುಂಬಾ ದೂರದಿಂದ ಬರುತ್ತಿದ್ದಾರೆ. ಅವರ ಮನೆಗಳು ಶಾಲೆಯಿಂದ ಸುಮಾರು 5-6 ಕಿ.ಮೀ. ಗಳಷ್ಟು ದೂರದಲ್ಲಿವೆ. ಹಾಗಾಗಿ ತಡವಾಗಿ ಬರುವ ಮಕ್ಕಳನ್ನು ನಾವು ಬೈಯ್ಯುವುದಿಲ್ಲ. ನಿಜಕ್ಕೂ ಅಷ್ಟು ದೂರದಿಂದ ಬರುವುದು ಅವರು ಮಾಡುತ್ತಿರುವ ನಿತ್ಯ ಸಾಹಸವೆಂದೇ ಹೇಳಬೇಕು ಮತ್ತು ಅದಕ್ಕಾಗಿ ನಾವು ಅವರನ್ನು ಮೆಚ್ಚಬೇಕು. 1 & 2ನೇ ತರಗತಿಯ ಮಕ್ಕಳೂ ಸಹ ಪ್ರತಿನಿತ್ಯ 10 ಕಿ.ಮೀ. ಗಿಂತ ಹೆಚ್ಚು ದೂರ ನಡೆಯುತ್ತಾರೆ. ಅವರ ಈ ದೈಹಿಕ ಕ್ಷಮತೆ ಎಂಥವರನ್ನೂ ಬೆರಗುಗೊಳಿಸುತ್ತದೆ.

ಇಂದೂ ಸಹ ಎಲ್ಲಾ ಮಕ್ಕಳು 8-30ಕ್ಕೆ ಅಂದರೆ ಪ್ರಾರ್ಥನೆ ಮುಗಿಯುವ ವೇಳೆಗೆ ತಲುಪಿದರು. ನಾನು ಅಡುಗೆಯವರ ವಿಚಾರವಾಗಿ ಪೋಷಕರನ್ನೂ ಕರೆಯಲು ತಿಳಿಸಿದ್ದೆ. ಅವರು 9 ಗಂಟೆಯ ನಂತರ ಬಂದರು. ಆದರೆ ಅವರ ಸಂಖ್ಯೆ ಮಾತ್ರ ಬೆರಳೆಣಿಕೆಯಷ್ಟಿತ್ತು.

## 8-ಆಗಸ್ಟ್-2007

ಇಂದು ನಾನು ಸರಿಯಾಗಿ 8 ಗಂಟೆಗೆ ಶಾಲೆ ತಲುಪಿದೆ. ಬಿ.ಇ.ಓ ಮತ್ತು ಡೆಪ್ಯುಟಿ ಬಿ.ಇ.ಓ ರವರು ಕೆಲವು ಶಾಲೆಗಳಿಗೆ ಭೇಟಿ ನೀಡುತ್ತಾರೆ ಎಂಬ ಸುದ್ದಿ ಕೇಳಿದ್ದೆ. ಹಾಗಾಗಿ ನಮ್ಮ ಶಾಲೆಗೂ ಬರಬಹುದೆಂದು ನಿರೀಕ್ಷಿಸಿದ್ದೆ. ಸಾಮಾನ್ಯವಾಗಿ 8-30ಕ್ಕೆ ಪ್ರಾರ್ಥನೆ ಮುಗಿಸುತ್ತಿದ್ದವರು ಇಂದು 8-00 ಗಂಟೆಗೆ ಪ್ರಾರ್ಥನೆ ಮುಗಿಸಿದೆವು. ಪ್ರಾರ್ಥನಾ ಸಮಯಕ್ಕೆ ಎಲ್ಲಾ ಮಕ್ಕಳು ಹಾಜರಿರದಿದ್ದರೂ ತರಗತಿಗಳು ಶುರುವಾಗುವ ವೇಳೆಗೆ ಎಲ್ಲಾ ಮಕ್ಕಳು ಬಂದರು. ಇಂದು 63 ಮಕ್ಕಳಲ್ಲಿ 45 ಮಕ್ಕಳು ಹಾಜರಿದ್ದರು. ವಿದ್ಯಾ ಕೇಂದ್ರದ ಮಕ್ಕಳನ್ನು ಸೇರಿಸಿ ಒಟ್ಟು 58 ಮಕ್ಕಳು ಶಾಲೆಯಲ್ಲಿದ್ದರು.

ಇಂದು 4 & 5 ನೇ ತರಗತಿಯ ಮಕ್ಕಳಲ್ಲಿ ಹಿಂದಿ ಓದುವ ಸಾಮರ್ಥ್ಯವನ್ನಾಧರಿಸಿ ಎರಡು ಗುಂಪುಗಳನ್ನಾಗಿ ವಿಂಗಡಿಸಿದೆವು. ಮೊದಲ ಗುಂಪಿನಲ್ಲಿ ಚೆನ್ನಾಗಿ ಓದುವ / ಪದಗಳನ್ನು ಓದುವ ಆದರೆ ವಾಕ್ಯಗಳನ್ನು ಓದಲು ಕಷ್ಟಪಡುವ / ಓದುವ ಆದರೆ ಸರಾಗವಾಗಿ ಓದದ ಮಕ್ಕಳಿದ್ದರು. ಎರಡನೇ ಗುಂಪಿನಲ್ಲಿ ಅಕ್ಷರಗಳನ್ನು ಗುರ್ತಿಸುವ ಮತ್ತು ಕೇವಲ ಸರಳ ಪದಗಳನ್ನು ಮಾತ್ರ ಓದಬಲ್ಲ ಮಕ್ಕಳಿದ್ದರು. ಎರಡೂ ತರಗತಿಗಳಿಂದ ಒಟ್ಟು 20 ಮಕ್ಕಳಿದ್ದರು. ಅದರಲ್ಲಿ 10 ಮಕ್ಕಳು ಮೊದಲ ಗುಂಪಿಗೆ, 10 ಮಕ್ಕಳು ಎರಡನೆ ಗುಂಪಿಗೆ ಸೇರಲು ಅರ್ಹರಿದ್ದರು.

ಮೊದಲ ಗುಂಪಿಗೆ 4ನೇ ತರಗತಿಯ ಹಿಂದಿ ಪಠ್ಯಪುಸ್ತಕದಲ್ಲಿನ 2ನೇ ಪಾಠವನ್ನು ಓದಿಸಿದೆ. ನಂತರ ಪಠ್ಯಪುಸ್ತಕದ ಕೊನೆಯಲ್ಲಿ ನೀಡಿರುವ ಕಠಿಣ ಪದಗಳ ಮೊದಲ ನಾಲ್ಕು ಅನುಚ್ಛೇದಗಳನ್ನು ಕಪ್ಪು ಹಲಗೆಯ ಮೇಲೆ ಬರೆದು ತಮ್ಮ ನೋಟ್ ಪುಸ್ತಕಗಳಲ್ಲಿ ಬರೆದುಕೊಳ್ಳಲು ತಿಳಿಸಿದೆ ಹಾಗೂ ಅವುಗಳನ್ನು ಓದುವ ಅಭ್ಯಾಸ ಮಾಡಿಸಿದೆ.



ಎರಡನೆಯ ಗುಂಪಿಗೆ ಈಗಾಗಲೆ ತಯಾರಿಸಿದ್ದ 130 ಪದಗಳ ಒಂದು ಪಟ್ಟಿಯನ್ನು ಕೊಟ್ಟು ಮೌನವಾಗಿ ಓದಿಕೊಳ್ಳಲು ತಿಳಿಸಿದೆ. ಇಂದಿನ ಮೊದಲ ಅವಧಿಯಲ್ಲಿ ಇಷ್ಟು ಮಾತ್ರ ಮಾಡಲು ಸಾಧ್ಯವಾಯಿತು.

ಎರಡನೆ ಅವಧಿಯಲ್ಲಿ 3ನೇ ತರಗತಿಗೆ ಗಣಿತ ಬೋಧಿಸಿದೆ. ಇಲ್ಲೂ ಮಕ್ಕಳನ್ನು ಎರಡು ಗುಂಪುಗಳಲ್ಲಿ ವಿಂಗಡಿಸಿದೆ. ಮೊದಲ ಗುಂಪು 100 ರವರೆಗೆ ಸಂಖ್ಯೆಗಳನ್ನು ಗುರ್ತಿಸಬಲ್ಲವರು ಮತ್ತು ಉಳಿದವರು ಎರಡನೆ ಗುಂಪು. ಮೊದಲ ಗುಂಪಿಗೆ ದಶಕ ರಹಿತ ಸಂಕಲನದ ಲೆಕ್ಕಗಳನ್ನು ಹೇಳಿಕೊಟ್ಟೆ. ಎರಡನೆ ಗುಂಪಿಗೆ 100 ವರೆಗೆ ಸಂಖ್ಯೆಗಳನ್ನು ಗುರ್ತಿಸುವ ಅಭ್ಯಾಸ ಮಾಡಿಸಿದೆ.

ಎರಡನೆಯ ಗುಂಪಿನ ಮಕ್ಕಳಿಗೆ ಸಂಖ್ಯೆಗಳನ್ನು ಕಲಿಸಲು ತುಂಬಾ ಶ್ರಮ ವಹಿಸಬೇಕಾದ ಅಗತ್ಯವಿದೆ. ಏಕೆಂದರೆ ಬಿಡಿ ಮತ್ತು ಹತ್ತರ ಸ್ಥಾನದ ಕಲ್ಪನೆ ನೀಡಿದ ನಂತರವೂ ಅವರಿಗೆ 100 ವರೆಗಿನ ಸಂಖ್ಯೆಗಳನ್ನು ಗುರ್ತಿಸಲು ಸಾಧ್ಯವಾಗುತ್ತಿಲ್ಲ. ಆದರೆ ಮೊದಲ ಗುಂಪಿನವರು ಮಾತ್ರ ಈಗೀಗ ಸಂಕಲನದ ಪರಿಕಲ್ಪನೆಯನ್ನು ಅರ್ಥ ಮಾಡಿಕೊಳ್ಳುತ್ತಿದ್ದಾರೆ. ಆದರೆ ಸ್ಥಾನಕ್ಕನುಗುಣವಾಗಿ ಸಂಖ್ಯೆಗಳನ್ನು ಬರೆಯುವಲ್ಲಿ, ಸರಿಯಾದ ಚಿಹ್ನೆ ಬಳಸುವಲ್ಲಿ ಇನ್ನೂ ಎಡವುತ್ತಿದ್ದಾರೆ.

ಸಂಖ್ಯೆಗಳನ್ನು ಓದುವುದು ಮತ್ತು ಗುರ್ತಿಸುವುದನ್ನು ಕಲಿಸುವುದು 3ನೆಯ ತರಗತಿಯ ಸಾಮರ್ಥ್ಯವಲ್ಲದಿದ್ದರೂ, ಮೂಲ ಪರಿಕಲ್ಪನೆಗಳನ್ನು ಸರಿಯಾಗಿ ಹೇಳಿಕೊಡದೆ ಮುಂದುವರಿಯುವುದು ಸರಿಯಲ್ಲ.

ಇತ್ತೀಚೆಗೆ ಮಕ್ಕಳ ಜತೆ ಸಂಪೂರ್ಣವಾಗಿ ತೊಡಗಿಸಿಕೊಂಡ ನಂತರ ನನಗೆ ನನ್ನ ತಪ್ಪಿನ ಅರಿವಾಗುತ್ತಿದೆ. ನನ್ನ ಸ್ವಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುವ ಲೋಕಸಹಜ ಆದರೆ ಬಾಲಿಶವಾದ ಆಸೆಯ ಬೆನ್ನುಹತ್ತಿ ನಾನು ಮಕ್ಕಳಿಗೆ ಭರಿಸಲಾಗದ ನಷ್ಟವುಂಟು ಮಾಡಿದ್ದೇನೆ.

ಇದುವರೆಗೆ ನಾನು 3, 4 & 5ನೇ ತರಗತಿಗಳ ಹಿಂದಿ ಮತ್ತು ಗಣಿತ ವಿಷಯಗಳಲ್ಲಿ ಮಾತ್ರ ಕಾರ್ಯ ಪ್ರವೃತ್ತನಾಗಿದ್ದೇನೆ. 1 & 2ನೇ ತರಗತಿಗಳ ಬಗ್ಗೆ ಗಮನಹರಿಸಿಲ್ಲ. ಬಿಂದು ಮತ್ತು ಕೇದಾರಿಯವರು ಆ ತರಗತಿಗಳಿಗೆ ಸಾಂಪ್ರದಾಯಿಕ ವಿಧಾನಗಳಲ್ಲಿ ಬೋಧಿಸುತ್ತಿದ್ದಾರೆ. ಅವರ ಸತತ ಮತ್ತು ಕಠಿಣ ಪ್ರಯತ್ನದ ಹೊರತಾಗಿಯೂ ಯಾವುದೇ ಫಲಿತಾಂಶ ಕಾಣುತ್ತಿಲ್ಲ.

ಈಗಲೂ ಬಹುವರ್ಗ ಬೋಧನೆಗೆ ನನ್ನ ಸಹಮತವಿಲ್ಲ. ಪ್ರಾಸಂಗಿಕವಾಗಿ ಕೆಲವೊಮ್ಮೆ ಅದೂ ಒಂದೆರಡು ದಿನಗಳ ಮಟ್ಟಿಗೆ ಮಾಡಬಹುದು. ಆದರೆ ಪ್ರತಿದಿನ ಒಂದೇ ಕೊಠಡಿಯಲ್ಲಿ ಹಲವು ತರಗತಿಗಳ ಮಕ್ಕಳಿಗೆ ಬೋಧಿಸುವುದಾದರೆ, ನಿಜಕ್ಕೂ ಬಹುವರ್ಗ ಬೋಧನೆ ಅರ್ಥವಿಲ್ಲದ್ದು.

ಇಂದು ಮತ್ತೆ 4 & 5ನೇ ತರಗತಿ ಮಕ್ಕಳಿಗೆ 4ನೇ ತರಗತಿಯ ಹಿಂದಿ, 2ನೇ ಪಾಠದ ಅನುಕರಣ ವಾಚನ (ಶಿಕ್ಷಕರು ಓದಿದ್ದನ್ನು ಮಕ್ಕಳು ಜೋರಾಗಿ ಹೇಳುವುದು) ಮಾಡಿಸಿದೆ. ಇದಕ್ಕೆ ಸುಮಾರು ಅರ್ಧ ಗಂಟೆ ಬೇಕಾಯಿತು. ಇಂಥ ಸನ್ನಿವೇಶಗಳಲ್ಲಿ ಬೇರೆ ತರಗತಿಯ ಮಕ್ಕಳನ್ನು ತೊಡಗಿಸಿಕೊಳ್ಳುವುದು ಸಾಧ್ಯವಾದರೂ, ಅವರನ್ನು ತಮ್ಮ ತರಗತಿಯ ವಿಷಯಗಳನ್ನು ಸ್ವಕಲಿಕೆಯಿಂದ ಕಲಿಯುವಂತೆ ಮಾಡುವುದು ವಾಸ್ತವದಲ್ಲಿ ಕಷ್ಟವೂ ಅಷ್ಟೇ ಶ್ರಮದಾಯಕವೂ ಆಗಿದೆ.

ಇಂದು ಊಟದ ನಂತರ ಎಲ್ಲಾ ಮಕ್ಕಳು ಸ್ವಾತಂತ್ರ್ಯ ದಿನಾಚರಣೆಯ ಸಿದ್ಧತೆಯಲ್ಲಿ ಪಾಲ್ಗೊಂಡರು. ಅವರು ಇದರಲ್ಲಿ ತುಂಬಾ ಉತ್ಸಾಹಿಗಳಾಗಿದ್ದರು. ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸಬೇಕೆಂದು ಅವರೇ ನನ್ನನ್ನು ವಿನಂತಿಸಿಕೊಂಡರು. ಎಲ್ಲಾ ಮಕ್ಕಳನ್ನು ಒಟ್ಟಿಗೆ ವರಾಂಡದಲ್ಲಿ ಕೂರಿಸಿದೆವು. ಮಕ್ಕಳು ಸ್ವ ಇಚ್ಛೆಯಿಂದ ಕೆಲವು ಜಾನಪದ ಗೀತೆಗಳನ್ನು ಮತ್ತು ಇತರೆ ತಮಗೆ ಇಷ್ಟವಾದ ಕೆಲವು ಹಾಡುಗಳನ್ನು ಹಾಡಿದರು. ಕೆಲವು ಹುಡುಗಿಯರು ನೃತ್ಯವನ್ನೂ ಮಾಡಿದರು.

ಸರಿಯಾಗಿ 1-00 ಗಂಟೆಗೆ ಶಾಲೆ ಮುಕ್ತಾಯವಾಯಿತು.

ಹಾಗಾಗಿ ಇಂತಹ ಸಭೆಯ ಲಾಭವನ್ನು ಬಳಸಿಕೊಂಡು ನಾನು ಜಿಲ್ಲಾ ಕಛೇರಿಯಲ್ಲಿನ ನನ್ನ ಕಾರ್ಯಗಳನ್ನು ಮುಗಿಸಲು ತೀರ್ಮಾನಿಸಿದೆ. ಟೆಲಿಫೋನ್ ಬಿಲ್ ಮತ್ತು ಎಲ್.ಐ.ಸಿ. ಪ್ರೀಮಿಯಮ್‌ಗಳನ್ನು ತುಂಬಿದೆ. ಎರಡು ವರ್ಗಾವಣಾ ಪತ್ರಗಳ ಮೇಲೆ ಕೌಂಟರ್ ಸಹಿ ತೆಗೆದುಕೊಳ್ಳಬೇಕಾಗಿತ್ತು. ಆದರೆ ಅಪರ ಜಿಲ್ಲಾ ಶಿಕ್ಷಣಾಧಿಕಾರಿಗಳು ಮಾನ್ಯ ಶಿಕ್ಷಣ ಮಂತ್ರಿಗಳನ್ನು ಸ್ವಾಗತ ಮಾಡಿಕೊಳ್ಳಲು ಬೇರೆ ಕಡೆ ಹೋಗಿದ್ದರು. ಹಾಗಾಗಿ ಆ ಕೆಲಸ ಹಾಗೆ ಉಳಿಯಿತು. ನಾನು ಉತ್ತರಕಾಶಿಗೆ ಹಿಂತಿರುಗಿದ ತಕ್ಷಣ ಮೊದಲು ಸೌರಭ್‌ಜೀ, ನಂತರ ಅನಂತ್ ಸರ್ ರವರ ದೂರವಾಣಿ ಕರೆಗಳು ಬಂದವು. ಸೌರಭ್‌ಜೀರವರು ಈ ತಿಂಗಳ 15 ರಿಂದ 17ರ ವರೆಗೆ ಡೆಹ್ರಾಡೂನ್‌ನಲ್ಲಿ ನಡೆಯಲಿರುವ ಹಿಮ್ಮಾಹಿತಿ ಕಾರ್ಯಾಗಾರಕ್ಕೆ ಅನೌಪಚಾರಿಕವಾಗಿ ಹಾಜರಾಗುವಂತೆ ಆಹ್ವಾನಿಸಿದರು. ಅನಂತ್‌ರವರು ಕಾರ್ಯಾಗಾರದ ಉದ್ದೇಶಗಳ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಿದರು ಮತ್ತು ಇನ್ನು ಕೆಲವು ಶಿಕ್ಷಕರ ಹೆಸರುಗಳನ್ನು ಸೂಚಿಸುವಂತೆ ಹೇಳಿದರು. ನನಗೆ ತಕ್ಷಣಕ್ಕೆ ನೆನಪಾದವರು ಯಮುನಾ ಪ್ರಸಾದ್ ಅವಸ್ತಿಯವರು. ಆದ್ದರಿಂದ ಅವರಿಗೆ ಕರೆ ಮಾಡಿ ಕಾರ್ಯಾಗಾರಕ್ಕೆ ಬರುವಂತೆ ವಿನಂತಿಸಿದೆ.

ಉತ್ತರಕಾಶಿಯಿಂದ ಹಿಂತಿರುಗುವಾಗ 'ಯುಗವಾಣಿ' ಮಾಸಪತ್ರಿಕೆ ತೆಗೆದುಕೊಂಡೆ. ಅದರಲ್ಲಿ ರಸ್ಕಿನ್ ಬಾಂಡ್‌ನ ನೆನಪುಗಳು, ಸೀತಾರಾಮ್ ಬಹುಗುಣರವರ ಹೊಸ ಪಠ್ಯಪುಸ್ತಕಗಳ ಮೇಲಿನ ಒಂದು ಲೇಖನ, ಜಿ.ಸಿ. ಜೋಷಿರವರ 'ಸ್ವಾತಂತ್ರ್ಯ ಹೋರಾಟದಲ್ಲಿ ಗುಡ್ಡಗಾಡು ಪ್ರದೇಶದ ಮಹಿಳೆಯರ ಪಾತ್ರ' ಎಂಬ ಲೇಖನ ಮತ್ತು ಪಂಕಜ್ ಭಿಷ್ಟ್‌ರವರು ಬರೆದಿದ್ದ 'ಮನೆ' ಎಂಬ ಕಥೆ ಇತ್ಯಾದಿಗಳನ್ನು ಓದಿದೆ. ಯುಗವಾಣಿ ಉತ್ತಮ ವಿಚಾರಗಳನ್ನು ಒಳಗೊಂಡಿರುತ್ತದೆ. ಧೌಂತರಿಗೆ ಹಿಂತಿರುಗಿದ ನಂತರ ನಾನು 2475ರೂ. ಗಳ ಒಂದು ಡಿ.ಡಿ.ಯನ್ನು ಸ್ವೀಕರಿಸಿದೆ. ಪಠ್ಯಪುಸ್ತಕ ರಚನಾ ಕಾರ್ಯಾಗಾರದಲ್ಲಿ ಪಾಲ್ಗೊಂಡಿದ್ದಕ್ಕಾಗಿ ಗೌರವಧನವನ್ನು ಕಳುಹಿಸಿದ್ದರು. ಹಾಗಾಗಿ 8–30ಕ್ಕೆ ಎ.ಸಿ.ಆರ್.ಟಿ ನಿರ್ದೇಶಕರಿಗೆ ಕೃತಜ್ಞತೆಗಳನ್ನು ತಿಳಿಸುತ್ತಾ ಒಂದು ಪತ್ರವನ್ನು ಟೈಪ್ ಮಾಡಿದೆ. ಗುಲಾಮ್ ಆಲಿಯವರ ಗಜಲ್‌ಗಳನ್ನು ಕೇಳುತ್ತಾ 9 ರಿಂದ 10–30ರವರೆಗೆ ಡೈರಿ ಬರೆದೆ. ಈಗ ಅರ್ಧ ಗಂಟೆ ಆಗಸ್ಟ್ ತಿಂಗಳ ಕದಂಬಿನಿ ಮಾಸಪತ್ರಿಕೆಯನ್ನು ಓದಿ ನಂತರ ಮಲಗುತ್ತೇನೆ.

## 11–ಆಗಸ್ಟ್–2007

ಸರಿಯಾಗಿ 7–15ಕ್ಕೆ ಶಾಲೆ ತಲುಪಿದೆ. ಕೇವಲ ಇಬ್ಬರು ಮಕ್ಕಳು ಬಂದಿದ್ದರು. ಅವರು ತರಗತಿ ಕೊಠಡಿಗಳನ್ನು ತೆಗದು ಸಫಾಯಿ ಮಾಡಿದರು. 7–30ಕ್ಕೆ ಬಿಂದು ಸಹ ಬಂದಳು. ವಿಮಲ 8–00 ಗಂಟೆಗೆ ಬಂದಳು. 7–30ಕ್ಕೆ ಪ್ರಾರ್ಥನೆಗೆ ನಿಲ್ಲಿಸಿದೆವು. ಆಗ ಕೇವಲ 30 ಮಕ್ಕಳು ಹಾಜರಿದ್ದವು. 8 ಗಂಟೆಯ ವೇಳೆಗೆ ಹಾಜರಿದ್ದವರ ಸಂಖ್ಯೆ 45ಕ್ಕೆ ಏರಿತು. ಇತ್ತೀಚೆಗೆ ಮಳೆಗಾಲವಾದ್ದರಿಂದ ಬಹುತೇಕ ಕುಟುಂಬಗಳು ದೂರದ ತಾಂಡಾಗಳಲ್ಲಿ ವಾಸ ಮಾಡುತ್ತವೆ. ಇದರಿಂದ ಶಾಲೆಯ ಹಾಜರಾತಿ ಪ್ರಮಾಣ ತುಂಬಾ ಕಡಿಮೆಯಾಗಿದೆ. ಮಕ್ಕಳು ಶಾಲೆ ತಲುಪಲು ಸುಮಾರು 5 ಕಿ.ಮೀ. ಗಳವರೆಗೆ ನಡೆದು ಬರಬೇಕು. ನಮ್ಮ ಶಾಲೆ ಮೂಲ ವಸತಿ ಪ್ರದೇಶದಿಂದ ಸುಮಾರು 1.5 ಕಿ.ಮೀ ದೂರವಿರುವುದರಿಂದ ಕನಿಷ್ಟ 1 ಕಿ.ಮೀ. ಆದರೂ ನಡೆಯಲೇಬೇಕು. 4–5ನೇ ಮಕ್ಕಳನ್ನು ಸಾಮಾನ್ಯ ದಿನಗಳಲ್ಲಿ ಸಮಯಕ್ಕೆ ಸರಿಯಾಗಿ ಬರುವಂತೆ ತಾಕೀತು ಮಾಡುತ್ತೇನೆ. ಆದರೆ ಈಗ 9 ಗಂಟೆಗೆ ಬಂದರೂ ಬೈಯ್ಯುವುದಿಲ್ಲ. 1 & 2ನೇ ತರಗತಿಗಳಲ್ಲಿ ಹಾಜರಾತಿ ತುಂಬಾ ಕಡಿಮೆಯಾಗಿದೆ. ಪುಟಾಣಿಗಳಾದ ರಾಮ, ಗಣೇಶ್, ಶಿವ ಮತ್ತು 3ನೇ ತರಗತಿಯ ವಿಶೇಷ ಅಗತ್ಯವುಳ್ಳ ಮಗು ಮಮತ, ಇವರಿಗೆ ಪ್ರತಿ ನಿತ್ಯ 5 ಕಿ.ಮೀ. ನಡೆಯುವುದು ತುಂಬಾ ಕಷ್ಟವಾಗುತ್ತದೆ. ಹೀಗಾಗಿ ದೂರದಿಂದ ಬರುತ್ತಿದ್ದ ಮಕ್ಕಳು ಈಗ ಸರಿಯಾಗಿ ಬರುತ್ತಿಲ್ಲ. ಇಂದು ಪ್ರಾರ್ಥನೆ ಅವಧಿ 7–30 ರಿಂದ 8–20 ರವರೆಗೆ ಮುಂದುವರೆಯಿತು. ಪ್ರಾರ್ಥನೆಯ ನಂತರ ಮಕ್ಕಳಿಗೆ ಪ್ರತಿಜ್ಞೆಯನ್ನು ಸ್ಪಷ್ಟವಾಗಿ ಹೇಳುವ ಅಭ್ಯಾಸ ಮಾಡಿಸಿದೆ. ಮಕ್ಕಳು ದೇಶಭಕ್ತಿ ಗೀತೆಗಳನ್ನು ಹಾಡಿದರು ಜೊತೆಗೆ ಇತರೆ ಕೆಲವು ಹಾಡು ಮತ್ತು ನೃತ್ಯಗಳನ್ನು ಅಭ್ಯಾಸ ಮಾಡಿದರು.



ಮಳೆಗಾಲವಾದ್ದರಿಂದ ದಾರಿಯಲ್ಲಿ ಜರಿ(ಶತಪದಿ), ಚೇಳಿನಂತಹ ವಿಷಜಂತುಗಳ ಭಯ ಮತ್ತು ಹಳ್ಳ ದಿಣ್ಣೆಗಳಿಂದ ಕೂಡಿದ ಆ ಕಾಲು ದಾರಿಗಳಲ್ಲಿ ಜಾರಿ ಬೀಳುವ ಸಂಭವ, ಇವುಗಳ ಪರಿಣಾಮ ಮಕ್ಕಳ ಹಾಜರಾತಿ ಕುಸಿದಿತ್ತು. 3, 4 & 5 ತರಗತಿಗಳಲ್ಲಿ ಹಾಜರಾತಿ ಸಾಧಾರಣವಾಗಿತ್ತು. ಮೂರನೆಯ ತರಗತಿಯಲ್ಲಿ 20 ಮಕ್ಕಳಲ್ಲಿ 4, 4–5ನೇ ತರಗತಿಯಲ್ಲಿ 1 ಗೈರು ಹಾಜರಿದ್ದವು. ಆದರೂ 15 ದಿನಗಳ ನಂತರ ಹಿರಿ ಮಕ್ಕಳ ಹಾಜರಾತಿ ಕುಸಿಯುತ್ತದೆ.

ಅಡುಗೆಯವರು 8–30ಕ್ಕೆ ಬಂದರು. ಇಂದು ಬಾತ್ ಮಾಡಿದ್ದಳು. ಸರಿಯಾಗಿ 10 ಗಂಟೆಗೆ ಅಡುಗೆ ಸಿದ್ಧವಾಗಿತ್ತು. 10–30ರ ವರೆಗೆ ಮಕ್ಕಳು ಊಟ ಮಾಡಿ ತಮ್ಮ ಆಸನಕ್ಕಾಗಿ ಬಳಸುವ ಚೀಲಗಳನ್ನು ತೊಳೆದರು. ನಂತರ ನಾವು ಮೂವರು ಮಕ್ಕಳೊಡನೆ ಕೂಡಿ ಕೇರಮ್ ಆಡಿದೆವು. 11 ಗಂಟೆಯಿಂದ ಸ್ವಾತಂತ್ರ್ಯ ದಿನಾಚರಣೆಯ ಸಿದ್ಧತೆಗಳನ್ನು ಮಾಡಿಸಿದೆವು. ಎಲ್ಲಾ ಮಕ್ಕಳನ್ನು ವರಾಂಡದಲ್ಲಿ ಕೂರಿಸಿದೆವು. ಮಕ್ಕಳು ಹಾಡು, ನೃತ್ಯ, ಭಾಷಣ ಮುಂತಾದುವುಗಳನ್ನು ಆಭ್ಯಾಸ ಮಾಡಿದರು.

ನಾನು 8–30 ರಿಂದ 9–15 ರವರೆಗೆ 4–5 ನೇ ತರಗತಿಯ ಮೊದಲ ಗುಂಪಿನ ಮಕ್ಕಳಿಗೆ 4ನೇ ತರಗತಿಯ ಹಿಂದಿ, ಎರಡನೆ ಪಾಠವನ್ನು ಅನುಕರಣ ವಾಚನ ಮಾಡಿಸಿದೆ. ಪಾಠದಲ್ಲಿ ಕಠಿಣ ಶಬ್ದಗಳನ್ನು ಕಪ್ಪುಹಲಗೆ ಮೇಲೆ ಬರೆದು ಅರ್ಥ ತಿಳಿಸಿ, ಪಾಠದ ಕುರಿತು ಚರ್ಚಿಸಿದೆ. ಈ ಗುಂಪಿನವರು ಹಿಂದಿ ಮಾತುಗಳನ್ನು ಅರ್ಥ ಮಾಡಿಕೊಳ್ಳುತ್ತಾರೆ. ಆದರೆ ಉತ್ತರ ಕೊಡುವಾಗ ಅಪೂರ್ಣ ವಾಕ್ಯಗಳಲ್ಲಿ ಅಥವಾ ಒಂದೊಂದೆ ಪದದಲ್ಲಿ ಉತ್ತರಿಸುತ್ತಾರೆ. ಇದರಿಂದ ನನಗೆ ಒಂದು ಅರ್ಥವಾಗುತ್ತಿದೆ ಮಕ್ಕಳಿಗೆ ಮಾತೃಭಾಷೆಯಲ್ಲಿ ಉತ್ತರಿಸಲು ಅವಕಾಶ ಕೊಡುವುದರಿಂದ ಹಿಂದಿ ಭಾಷೆಯನ್ನು ಬಳಸುವುದೇ ಇಲ್ಲ. ನಾನು ಗಡವಾಲಿ (ಸ್ಥಳೀಯ/ಮಾತೃಭಾಷೆ) ಯಲ್ಲಿ ಚರ್ಚೆ ಮಾಡುವುದರಿಂದ ಮಕ್ಕಳು ಗಡವಾಲಿಯನ್ನೇ ಬಳಸುತ್ತಿವೆ. ಅದರಲ್ಲೇ ಪ್ರಶ್ನೆ ಕೇಳುತ್ತವೆ, ಅದರಲ್ಲೇ ಉತ್ತರ ನೀಡುತ್ತವೆ. ಆದ್ದರಿಂದ ನಾನು ತರಗತಿ ಮಾತೃಭಾಷೆಯ ಬಳಕೆ ನಿಲ್ಲಿಸದಿದ್ದರೆ ಮಕ್ಕಳಿಗೆ ಹಿಂದಿ ಮಾತನಾಡುವ ಅವಕಾಶ ಸಿಗುವುದಿಲ್ಲ. ಈ ಪ್ರಯೋಗವನ್ನು ನಾನು ಮಾಡಲೇ ಬೇಕು. ಏಕೆಂದರೆ ಮಕ್ಕಳು ಅಂತಿಮ ಪರೀಕ್ಷೆಯಲ್ಲಿ ಹಿಂದಿಯಲ್ಲೇ ಉತ್ತರ ಬರೆಯಬೇಕಾಗುತ್ತದೆ. ನಾನು ಈ ರೀತಿ ಮಾಡುವುದರಿಂದ ಹಿಂದಿಗೆ ಸ್ವಲ್ಪ ಪುಷ್ಟಿ ನೀಡಿದಂತಾಗುತ್ತದೆ.

ಆಗಸ್ಟ್ ತಿಂಗಳು ಪೂರ್ತಿ ನಾನು ಎಲ್ಲಾ ತರಗತಿಗಳಿಗೆ ಓದುವ ಕೌಶಲ ಬೆಳೆಸುವುದರ ಮೇಲೆ ಗಮನಹರಿಸಲು ಇಚ್ಛಿಸಿದ್ದೇನೆ.

ಇದೇ ತರಗತಿಗಳ ಎರಡನೆಯ ಗುಂಪಿಗೆ 'ಎರಡು ಮೇಕೆಗಳು' ಎಂಬ ಟೈಪ್ ಮಾಡಿದ್ದ ಕಥೆಯನ್ನು ಕೊಟ್ಟು ಮೌನವಾಗಿ ಓದಲು ತಿಳಿಸಿದೆ. ಆದರೆ ಹೆಚ್ಚಿನ ಗಮನಹರಿಸಲು ಸಾಧ್ಯವಾಗಲಿಲ್ಲ. ಆದರೆ ಓದಲು ನಾನು ಕೊಟ್ಟಿದ್ದ ಸಾಮಗ್ರಿ ಅವರ ಮೇಲೆ ಪ್ರಭಾವ ಬೀರುತ್ತಿತ್ತು. ದೂರದಿಂದಲೆ ಅದು ನನ್ನ ಅನುಭವಕ್ಕೆ ಬರುತ್ತಿತ್ತು. ಇದೇ ರೀತಿ ಮಕ್ಕಳು ಗೈರು ಹಾಜರಾಗದೆ ಶಾಲೆಗೆ ಬಂದರೆ ಅಕ್ಟೋಬರ್ ಮೊದಲ ವಾರದ ವೇಳೆಗೆ ಇವರನ್ನು ಮೊದಲ ಗುಂಪಿನವರ ಮಟ್ಟಕ್ಕೆ ತರುತ್ತೇನೆ. ಮತ್ತು ಮೊದಲ ಗುಂಪಿನವರು ಹಿಂದಿ ಭಾಷೆಯಲ್ಲಿ ಗಣನೀಯ ಪ್ರಗತಿ ಸಾಧಿಸಿರುತ್ತಾರೆ. ಇದೇ ಗುಂಪಿನಲ್ಲಿ ಹೆಚ್ಚು ಗೈರು ಹಾಜರಾಗುತ್ತಿದ್ದಾರೆ. ಚಿತ್ರ, ಗೀತ, ಶಿವಹರಿ, ಸಂಗೀತ, ಧ್ರುವಪಾಲ್ ಮತ್ತು ಸುಮನ ಇವರು ಹೆಚ್ಚು ಗೈರು ಹಾಜರಾಗುತ್ತಿದ್ದಾರೆ.

ಇಂದು ನಾನು ಇದೇ ತರಗತಿಗಳಿಗೆ ಸಂಕಲನವನ್ನು ಕಲಿಸಿದೆ. ಮೊದಲ ಗುಂಪು ಐದಂಕಿ ಸಂಖ್ಯೆಗಳ ದಶಕ ಸಹಿತ ಸಂಕಲನವನ್ನು ಮಾಡಿದರು. ಎರಡನೇ ಗುಂಪು ದಶಕ ರಹಿತ ಸಂಕಲನ ಮಾಡಿದರು. ಎರಡನೇ ಗುಂಪಿನ ಮಕ್ಕಳು ಇನ್ನೂ 100 ವರೆಗಿನ ಸಂಖ್ಯೆಗಳನ್ನು ಸರಿಯಾಗಿ ಗುರ್ತಿಸಲಾರರು. ಅವರಿಗೆ ಸಂಖ್ಯೆಗಳನ್ನು ಗುರ್ತಿಸುವಂತೆ ಮಾಡುವುದು ಒಂದು ಸವಾಲಾಗಿದೆ. ನಂತರವೇ ಅವರು ಸ್ಥಾನ ಬೆಲೆ ಕಲ್ಪನೆಯನ್ನು ಅರ್ಥ ಮಾಡಿಕೊಳ್ಳಬಲ್ಲರು ಮತ್ತು ಸಂಕಲನ, ವ್ಯವಕಲನಗಳನ್ನು ಕಲಿಯಬಲ್ಲರು. ಮೊದಲ ಗುಂಪಿನವರು ಏಪ್ರಿಲ್‌ನಲ್ಲೇ ಈ ಸಾಮರ್ಥ್ಯವನ್ನು ಗಳಿಸಿದರು.

3ನೇ ತರಗತಿಗೂ ಸಹ ದಶಕ ಸಹಿತ ಸಂಕಲನವನ್ನೇ ಹೇಳಿಕೊಟ್ಟೆ. ಬೆರಳುಗಳನ್ನು ಎಣಿಸಿ ಕೂಡುವ ವಿಧಾನವನ್ನೇ ಪುನರಾವರ್ತಿಸಿದೆ. ಇಲ್ಲೂ ಸಹ ಮೊದಲನೆಯ ಗುಂಪು ಕೆಲವೇ ದಿನಗಳಲ್ಲಿ ಸಂಖ್ಯೆಗಳನ್ನು ಮತ್ತು ಕೂಡುವುದನ್ನು ಕಲಿಯುತ್ತದೆ.

ಆದರೆ ಎರಡನೆಯ ಗುಂಪಿನಲ್ಲಿ ಸಂಖ್ಯೆಗಳನ್ನು ಗುರ್ತಿಸುವ ಸಮಸ್ಯೆ ಹಾಗೇ ಮುಂದುವರೆದಿದೆ. ಇವರಿಗೆ ಸಂಖ್ಯೆಗಳನ್ನು ಕಲಿಸಲು ನಾನು ತುಂಬಾ ಶ್ರಮವಹಿಸಬೇಕಾಗಿದೆ. ಏಕೆಂದರೆ ಈ ಗುಂಪಿಗೆ ಮಾಡಿದ ಇಲ್ಲಿವರೆಗಿನ ನನ್ನ ಪ್ರಯತ್ನಗಳು ಯಾವುದೇ ರೀತಿಯ ಯಶಸ್ಸನ್ನೂ ಕಂಡಿಲ್ಲ.

ಇದುವರೆಗೆ 1 ಮತ್ತು 2ನೆಯ ತರಗತಿಗಳನ್ನು ಖುದ್ದಾಗಿ ಮೇಲ್ವಿಚಾರಣೆ ಮಾಡುವುದು ನನ್ನಿಂದ ಸಾಧ್ಯವಾಗಿಲ್ಲ. ವಿಮಲ ಮತ್ತು ಬಿಂದು ಅವರಿಗೆ ಸಾಂಪ್ರದಾಯಿಕ ವಿಧಾನಗಳಲ್ಲಿ ಬೋಧಿಸುತ್ತಿದ್ದಾರೆ. ಆದರೆ ಅವರು ಸತತವಾಗಿ ಪ್ರಯತ್ನಿಸುತ್ತಿದ್ದಾರೆ. ಇವರಿಬ್ಬರಲ್ಲಿರುವ ಒಂದು ಸಾಮಾನ್ಯ ಉತ್ತಮ ಅಂಶವೆಂದರೆ ಇಬ್ಬರೂ ಮಕ್ಕಳನ್ನು ಬೈಯ್ಯುವುದಾಗಲೀ ಹೊಡೆಯುವುದಾಗಲೀ ಮಾಡುವುದಿಲ್ಲ.

**12–ಆಗಸ್ಟ್–2007**

ಇಂದು ನಾನು ಮಕ್ಕಳನ್ನು ಕರೆಯುತ್ತಿರುವ ಎರಡನೆಯ ಭಾನುವಾರ. ನಾನು ಸರಿಯಾಗಿ 9–30ಕ್ಕೆ ಶಾಲೆ ತಲುಪಿದೆ. ಮಕ್ಕಳಿಗೆ 9 ಗಂಟೆಗೆ ಬರುವಂತೆ ತಿಳಿಸಿದ್ದೆ. ಅವರು ಆ ಸಮಯಕ್ಕೆ ಸರಿಯಾಗಿ ಬಂದಿದ್ದರು. ಇಂದು ಮಳೆ ತುಂಬಾ ಜೋರಾಗಿತ್ತು. ಆದರೂ 3, 4 & 5ರ 20 ಮಕ್ಕಳು ಹಾಜರಾಗಿದ್ದರು. ಇನ್ನುಳಿದವರು ಎಮ್ಮೆ ಕಾಯಲು ದೂರದ ತಾಂಡಾ(ಛನಿಯಾ)ಕ್ಕೆ ಹೋಗಿದ್ದರು.

ನಾನು ಬರುವವರೆಗೆ ಮಕ್ಕಳನ್ನು ನೋಡಿಕೊಳ್ಳುತ್ತಿರುವಂತೆ ಕೇದಾರಿಗೆ ಹೇಳಿದ್ದೆ. ಆದರೆ ಕೇದಾರಿ ಬಂದಿರಲಿಲ್ಲ. ಬಹುಶಃ ಅವಳಿಗೆ ಜ್ವರವಿರಬೇಕು. ಕೇದಾರಿ ಸರ್ಕಾರದ ಆಶಾ ಯೋಜನೆಯಡಿಯಲ್ಲಿ ನೇಮಕಗೊಂಡು ಭಡಕೋಟ್ ಗ್ರಾಮ ಪಂಚಾಯತಿಯಲ್ಲಿ ಆರೋಗ್ಯ ಕಾರ್ಯಕರ್ತೆಯಾಗಿದ್ದಳು. ಜುಲೈ 28 ರಂದು ಬಂದು ತಾನು ಉಚಿತವಾಗಿ ಶಾಲೆಗೆ ಸೇವೆ ಸಲ್ಲಿಸುವುದಾಗಿ ತಿಳಿಸಿದಳು. ಇದರಿಂದ ತನ್ನ ಸಮಯವನ್ನು ಅರ್ಥಪೂರ್ಣವಾಗಿ ಕಳೆಯಬಹುದು ಮತ್ತು ತನ್ನ ಹಿಂದಿ ಮತ್ತು ಗಣಿತದ ಜ್ಞಾನವನ್ನು ಸುಧಾರಿಸಿಕೊಳ್ಳಬಹುದು ಎಂಬುದು ಅವಳ ಉದ್ದೇಶ. ಈ 10–15 ದಿನಗಳಲ್ಲಿ ನಾನು ಗಮನಿಸಿದಂತೆ ಅವಳು ಸಾಕಷ್ಟು ಕಾಗುಣಿತ ದೋಷಗಳನ್ನು ಮಾಡುತ್ತಾಳೆ. ಗಣಿತದಲ್ಲೂ ಸಹ ಚಿಕ್ಕ ಚಿಕ್ಕ ಕೂಡುವ ಮತ್ತು ಕಳೆಯುವ ಲೆಕ್ಕಗಳನ್ನೂ ತಪ್ಪು ಮಾಡುತ್ತಾಳೆ ಆದರೆ ಸರಿಯಾದ ಉತ್ತರವನ್ನು ಬಂದು ಕೇಳುತ್ತಾಳೆ. ನಾನು, ಗ್ರಾಮ ಪ್ರಧಾನ, ಶಾಲಾಭಿವೃದ್ಧಿ (ಶಿಕ್ಷಣ ಸಮಿತಿ) ಸಮಿತಿಯ ಸದಸ್ಯರು ಹಾಗೂ ಕೆಲವು ಪೋಷಕರನ್ನು ವಿಚಾರಿಸಿ, ಅವರ ಅನುಮತಿಯ ಮೇರೆಗೆ ಕೇದಾರಿಗೆ ಶಾಲೆಗೆ ಬರಲು ಅನುಮತಿ ನೀಡಿದೆ. ಆದರೂ ಅವಳಿಗೆ 1 & 2 ನೇ ತರಗತಿಗಳಿಗೆ ಕೇವಲ ಮೌಖಿಕವಾಗಿ ಬೋಧಿಸುವಂತೆ ತಿಳಿಸಿದ್ದೇನೆ.

ಕೇದಾರಿ ಒಬ್ಬ ಅರ್ಪಣಾ ಮನೋಭಾವದ ಹುಡುಗಿ. ಪಾಪ, ಅವಳ ಸುತ್ತಲಿನ ಪರಿಸ್ಥಿತಿಗಳು ಕೇವಲ 19 ವರ್ಷಕ್ಕೇ ಅವಳನ್ನು ಗೃಹಿಣಿಯನ್ನಾಗಿ ಮಾಡಿವೆ. 10ನೇ ತರಗತಿಯ ಪರೀಕ್ಷೆಯನ್ನೂ ಪಾಸು ಮಾಡಿದ್ದಾಳಾದರೂ ಅವಳ ತಿಳಿವಳಿಕೆಯ ಮಟ್ಟ 8ನೇ ತರಗತಿಯದ್ದಾಗಿದೆ. ಶಾಲೆಯಲ್ಲಿ ಮಕ್ಕಳ ಜತೆ ಕೆಲಸ ಮಾಡುವುದರಿಂದ ಅವಳಿಗೂ ಕಲಿಕೆಯಾಗುತ್ತದೆ ಎಂಬುದು ಅವಳ ಆಲೋಚನೆ. ಅವಳ ಗಂಡ ಚಂಡೀಗಢದ ಹೋಟೆಲ್ ಒಂದರಲ್ಲಿ ಕೆಲಸಮಾಡುತ್ತಾನೆ. ಕಾರ್ಯಕರ್ತೆಯಾಗಿ ಅವಳಿಗೆ ಬರುವ ಗೌರವ ಧನವೂ ತುಂಬಾ ಕಡಿಮೆ. ಬಹುಶಃ ಇದುವರೆಗೆ ಏನನ್ನೂ ಕೊಟ್ಟಿರಲಿಕ್ಕಿಲ್ಲ.

ನಾನು ಎಂದಿನಂತೆ 4 & 5ನೇ ತರಗತಿ ಮಕ್ಕಳನ್ನು ಒಂದುಕಡೆ ಕೂರಿಸಿದೆ ಮತ್ತು 3ನೇ ತರಗತಿ ಮಕ್ಕಳನ್ನು ಒಂದುಕಡೆ ಕೂರಿಸಿದೆ. 4–5ನೇ ತರಗತಿಯ ಮೊದಲನೆಯ ಗುಂಪಿನ ಮಕ್ಕಳು ಓದುವುದರಲ್ಲಿ ಪ್ರಭುತ್ವ ಸಾಧಿಸುತ್ತಿದ್ದಾರೆ. 1000 ವರೆಗಿನ ಸಂಖ್ಯೆಗಳನ್ನು ಓದುವುದರ ಜತೆಗೆ ಸ್ಥಾನ ಬೆಲೆಗಳನ್ನು ಗುರ್ತಿಸುವುದನ್ನೂ ಕಲಿಯುತ್ತಿದ್ದಾರೆ. ಈ ಗುಂಪಿನ ಮಕ್ಕಳಿಗೆ ನಾನು ದೊಡ್ಡ ದೊಡ್ಡ ಸಂಖ್ಯೆಗಳನ್ನು ಕೂಡುವುದನ್ನು ಅಭ್ಯಾಸ ಮಾಡಿಸಿದ್ದೇನೆ. ಕೂಡುವುದರ ಮೂಲಕ ಮಗ್ಗಿಯನ್ನು ಬರೆಯುವ ವಿಧಾನವನ್ನು ಹೇಳಿಕೊಡುತ್ತಿದ್ದೇನೆ. ಹೀಗೆ ಮಾಡಿಸಿ ಅವರ ಸಂಕಲನದ ಸಮಸ್ಯೆಗಳನ್ನು ಬಿಡಿಸುವ ಸಾಮರ್ಥ್ಯವನ್ನು ಪುಷ್ಟೀಕರಿಸುತ್ತಿದ್ದೇನೆ. ಇದರ ನಂತರವೇ ವ್ಯವಕಲನದ ಪರಿಕಲ್ಪನೆಯನ್ನು ಪರಿಚಯಿಸುತ್ತೇನೆ.



ಎರಡನೆಯ ಗುಂಪಿನ ಮಕ್ಕಳು ಇನ್ನೂ 100 ರವರೆಗಿನ ಸಂಖ್ಯೆಗಳನ್ನು ಸರಿಯಾಗಿ ಗುರ್ತಿಸಲು ಎಡವುತ್ತಿದ್ದಾರೆ. ಇವರು ದಶಕ ರಹಿತ ಸಂಕಲನದ ಲೆಕ್ಕಗಳನ್ನು ಮಾಡಲು ಕಲಿತಿದ್ದಾರೆ. ಬಹುಶಃ ಹತ್ತಿರದಲ್ಲೇ ಈ ಗುಂಪಿನ ಅನೇಕ ಮಕ್ಕಳು ದಶಕ ಸಹಿತ ಲೆಕ್ಕಗಳನ್ನೂ ಕಲಿಯುತ್ತಾರೆಂಬ ಭರವಸೆ ನನಗಿದೆ. ಇದೇ ರೀತಿ 3ನೇ ತರಗತಿಯ ಎರಡೂ ಗುಂಪುಗಳಿಗೆ ಸಂಕಲನವನ್ನೇ ಅಭ್ಯಾಸ ಮಾಡುವಂತೆ ಹೇಳಿದೆ. ಸರಿಯಾಗಿ 12 ಗಂಟೆಗೆ ಮಕ್ಕಳನ್ನು ಮನೆಗೆ ಬಿಟ್ಟೆ.

ನಾನು ಹೀಗೆ ಭಾನುವಾರವೂ ಶಾಲೆ ತೆರೆಯುತ್ತಿರುವುದಕ್ಕೆ ಕೆಲವರು ಅಸಮಾಧಾನ ವ್ಯಕ್ತಪಡಿಸಿದರು. ನಿಜಕ್ಕೂ ನನಗೆ ಆಶ್ಚರ್ಯವಾಗುತ್ತಿದೆ, ಜನ ಯಾಕೆ ಇಷ್ಟೊಂದು ಸಂಕುಚಿತ ಮನೋಭಾವವುಳ್ಳವರಾಗುತ್ತಿದ್ದಾರೆ ಎಂದು! ಯಾರು ಈ ರೀತಿ ವಿರೋಧ ವ್ಯಕ್ತಪಡಿಸುತ್ತಿದ್ದಾರೋ ಅವರ ಮಕ್ಕಳು ನಮ್ಮ ಶಾಲೆಯಲ್ಲಿಲ್ಲ, ಆದರೂ ಈ ನಿಷ್ಪ್ರಭಾವಿ ಜನರು ಹೀಗೇಕೆ ಮಾಡುತ್ತಾರೊ ಗೊತ್ತಿಲ್ಲ.

ಈ ಶಿಕ್ಷಕರಿಗೆ ಮನೆಯಲ್ಲೇನೂ ಕೆಲಸವಿಲ್ಲ ಅದಕ್ಕೆ ಕಾಲಹರಣ ಮಾಡಲು ಭಾನುವಾರವೂ ಶಾಲೆಗೆ ಬರುತ್ತಾರೆ ಎಂಬುದು ಇನ್ನು ಕೆಲವರ ಟೀಕೆ. ಇದನ್ನು ನನಗೆ ತಿಳಿಸಿದವರು ಈ ಮಕ್ಕಳೇ. ಆದರೆ ನನಗೇ ನೇರವಾಗಿ ಹೇಳಲು ಇನ್ನೂ ಯಾರಿಗೂ ಧೈರ್ಯ ಸಾಕಾಗಿಲ್ಲ.

ಭಾನುವಾರದಂದು ಮಕ್ಕಳಿಗೆ ಉಳಿದ ದಿನಗಳಂತೆ ಯಾವುದೇ ನಿರ್ಬಂಧಗಳಾಗಲೀ ಒತ್ತಡಗಳಾಗಲೀ ಇರುವುದಿಲ್ಲ. ಆದ್ದರಿಂದ ಅವರು ಮುಕ್ತವಾಗಿ, ಉಳಿದ ದಿನಗಳಿಗಿಂತ ಹೆಚ್ಚು ಆತ್ಮೀಯರಾಗಿ ನನ್ನೊಡನೆ ಬೆರೆಯುತ್ತಾರೆಂಬುದು ನನ್ನ ಅನಿಸಿಕೆ.

ನಾಳೆಯಿಂದ ಎನ್.ಪಿ.ಆರ್.ಸಿ. ಬಡೇಥದಲ್ಲಿ 9 ದಿನಗಳ ತರಬೇತಿಯಿದೆ. ನಾನು ಈ ತರಬೇತಿಗೆ ಮುಖ್ಯ ತರಬೇತುದಾರನಾಗಿ ಹೋಗಬೇಕಾಗಿದೆ. ನನಗೆ ಈ ತರಬೇತಿಗೆ ಹೋಗಲು ಆಸಕ್ತಿಯಿಲ್ಲದಿದ್ದರೂ ಹೋಗಲೇಬೇಕಾಗಿದೆ. ಮೇಲಿನವರ ಆದೇಶವನ್ನು ಪಾಲಿಸಬೇಕಾಗಿರುವುದರಿಂದ ಹೋಗಬೇಕಾಗಿದೆ. ಇಲ್ಲದಿದ್ದಲ್ಲಿ ಖಂಡಿತ ಈ ತರಬೇತಿಯಲ್ಲಿ ಪಾಲ್ಗೊಳ್ಳುತ್ತಿರಲಿಲ್ಲ. ಆಗಸ್ಟ್ 1 ರಿಂದ ನಿರಂತರವಾಗಿ ಮಕ್ಕಳ ಜತೆ ಒಡನಾಟವಿಟ್ಟುಕೊಂಡಿರುವುದರಿಂದ ಯಾವ ಪರಿ ಬಾಂಧವ್ಯ ಬೆಳೆದಿದೆ ಎಂದರೆ ಒಂದು ದಿನವೂ ಅವರನ್ನು ಬಿಟ್ಟಿರಲು ನನಗೆ ಇಷ್ಟವಾಗುವುದಿಲ್ಲ. ಆದರೂ ಅನಿವಾರ್ಯವಾಗಿ ಮಕ್ಕಳನ್ನು ಬಿಂದು, ವಿಮಲ ಮತ್ತು ಕೇದಾರಿಯರ ಬಳಿ ಬಿಟ್ಟು ಹೋಗಬೇಕಾಗಿದೆ. ಇನ್ನು 9 ದಿನ ನಾನು ತರಬೇತಿಯಲ್ಲಿರುತ್ತೇನೆ.

## ಯೋಚಿಸುತ್ತೇನೆ, ಜನ ಏನಂತಾರೋ?

ಮನ ಬಯಸಿದೆ
ತುಂಬಾ ಹೊತ್ತು ಹಾಗೇ ನಿಂತು
ಕಿಟಕಿ ಬಳಿ, ಓಡಾಡುವ ಜನರ ಹಿಂಡನು
ಹರಿದ ಬಟ್ಟೆಯ ಚಿಂದಿಹಾಯುವ ಹುಡುಗರನು
ಬಾನಲ್ಲಿ ಚಲಿಸುವ ಮೋಡಗಳನು
ನೋಡುತ ಇರಲು,
ಆದರೆ ಯೋಚಿಸುತಿರುವೆ ಜನ ಏನಂತಾರೋ?

ಮನ ಬಯಸಿದೆ
ನಾಲ್ಕು ಹೆಜ್ಜೆ ಹೊರ ಹಾಕಿ
ಮನೆಯಿಂದ ಹೊರ ನಡೆದು,
ತಾಯಿಯಿಲ್ಲದ ಮಕ್ಕಳೊಡನೆ,
ಅಂಗಳದಲ್ಲಿ ಹರಟುತಿರುವ ಅಜ್ಜಿಯೊಡನೆ,
ಕಾಲದೊಡನೆ ಸೆಣಸುತಿರುವ ಅಜ್ಜನೊಡನೆ
ಮನ ಬಿಚ್ಚಿ ಮಾತಾಡಲು.
ಆದರೆ ಯೋಚಿಸುತಿರುವೆ ಜನ ಏನಂತಾರೋ?

ಮನ ಬಯಸಿದೆ
ಈ ಗೂಡಿನಿಂದ ಹೊರಗೆ ಜಿಗಿದು,
ರೆಂಬೆಗಳ ಮೇಲೇರಿ,
ವಿಶಾಲ ಗಗನಕ್ಕೆ ಹಾರಿ,
ಸುದೀರ್ಘ ಪಯಣ ಮಾಡಿ ಮರಳಲು,
ಆದರೆ ಯೋಚಿಸುತಿರುವೆ ಜನ ಏನಂತಾರೋ?

ಮನಬಯಸಿದೆ
ಮೊದಲ ಪ್ರೀತಿಯ ಸ್ಮರಿಸಲು,
ಮೆಲುದನಿಯಲಿ ಗುನುಗಲು,
ಮನೆಯಂಗಳದಲ್ಲಿ ಮನದಣಿಯುವವರೆಗೂ
ಕಾಲ್ಗೆಜ್ಜೆಯ ಕಟ್ಟಿಕೊಂಡು ಕುಣಿಯಲು.
ಆದರೆ ಯೋಚಿಸುತಿರುವೆ ಜನ ಏನಂತಾರೋ?



**13,14–ಆಗಸ್ಟ್–2007**

ಇಂದು ಸರಿಯಾಗಿ 7 ಗಂಟೆಗೆ ಶಾಲೆ ತಲುಪಿದೆ. ಇಂದಿನಿಂದ ಬಡೇಥದಲ್ಲಿ ಆಯೋಜಿಸಿದ್ದ 9 ದಿನಗಳ ತರಬೇತಿಗೆ ನಾನು ಮುಖ್ಯ ತರಬೇತುದಾರನಾಗಿ ಹೋಗಬೇಕಾಗಿತ್ತು.

ತುಂತುರು ಮಳೆಯಾಗುತ್ತಿತ್ತು. 9 ಗಂಟೆಯವರೆಗೂ ಶಾಲೆಯಲ್ಲೇ ಉಳಿದೆ. 8–15ಕ್ಕೆ ಪ್ರಾರ್ಥನೆ ಮುಗಿಯಿತು. ಮಕ್ಕಳೆಲ್ಲ ತಮ್ಮ ತಮ್ಮ ತರಗತಿಗಳಲ್ಲಿ ಕುಳಿತುಕೊಂಡರು. ವಿಮಲಾಗೆ ಕೆಲವು ಆಡಳಿತಾತ್ಮಕ ಕಾರ್ಯಗಳ ಬಗ್ಗೆ ಮತ್ತು ಪಾಠ ಬೋಧನೆಯ ವಿಧಾನದ ಕುರಿತು ಕೆಲವು ಸೂಚನೆಗಳನ್ನು ನೀಡಿದ ನಂತರ 9 ಗಂಟೆಗೆ ಸರಿಯಾಗಿ ನಾನು ಬಡೇಥಕ್ಕೆ ಹೊರಟೆ.

ಸ್ಕೂಟರ್‌ನಲ್ಲಿ ಹೊರಟು ಸರಿಯಾಗಿ 10 ಗಂಟೆಗೆ ಸಿ.ಆರ್.ಸಿ. ಬಡೇಥಕ್ಕೆ ತಲುಪಿದೆ. ಒಟ್ಟು 28 ಶಿಕ್ಷಕರಿಗೆ ಈ ತರಬೇತಿಗೆ ಹಾಜರಾಗುವಂತೆ ಆದೇಶ ಕಳುಹಿಸಲಾಗಿತ್ತು. ಆದರೆ ಇಂದು ಕೇವಲ 8 ಜನ ಮಾತ್ರ ಉಪಸ್ಥಿತರಿದ್ದರು. ಅದರಲ್ಲಿ ಒಬ್ಬರು ರಿಜಿಸ್ಟರ್‌ನಲ್ಲಿ ಸಹಿ ಮಾಡಿ ಹೊರಟುಹೋದರು. ಉಳಿದ ಶಿಕ್ಷಕರು ಅವರು ಹೋದುದನ್ನು ನೋಡಿ ಒಳಗೊಳಗೇ ನಗುತ್ತಿದ್ದರು.

ಇಂದಿನ ತರಬೇತಿ ಬರೀ ಪರಿಚಯ ಮತ್ತು ತರಬೇತಿಯ ರೂಪುರೇಷೆಗಳನ್ನು ತಿಳಿಸುವುದಕ್ಕೆ ಸೀಮಿತವಾಯಿತು. 9 ದಿನಗಳ ತರಬೇತಿಯ ಸಂಕ್ಷಿಪ್ತ ಪರಿಚಯ ಮಾಡಿಕೊಟ್ಟೆ. ಮೊದಲ ಮೂರು ದಿನ ಪ್ರೇರಣಾ ತರಬೇತಿ, ನಂತರದ ಮೂರು ದಿನ ಪ್ರಥಮ್ ಸಂಸ್ಥೆಯ ಹೊಸ ಕಾರ್ಯಕ್ರಮದ ಕುರಿತು ಬುನಾದಿ ತರಬೇತಿ ಮತ್ತು ಕೊನೆಯ ಮೂರು ದಿನ ಮೌಲ್ಯಮಾಪನ, ಪರೀಕ್ಷೆಗಳು, ಕ್ರೋಢೀಕರಣ ಮತ್ತು ನೀಲ ನಕಾಶೆ ಕುರಿತು ತರಬೇತಿ ಹೀಗೆ 9 ದಿನಗಳಲ್ಲಿ ಮೂರು ವಿವಿಧ ವಿಷಯಗಳ ಕುರಿತು ತರಬೇತಿಯನ್ನು ಯೋಜಿಸಲಾಗಿತ್ತು.

ಶಿಕ್ಷಕರ ಸಂಖ್ಯೆ ಕಡಿಮೆ ಇದ್ದುದರಿಂದ ವಿಶೇಷವಾದುದು ಏನನ್ನಾದರೂ ತಿಳಿಸಬೇಕೆಂಬ ಉತ್ಸಾಹ ಉಂಟಾಗಲಿಲ್ಲ. ಹಾಜರಿದ್ದ ಶಿಕ್ಷಕರೊಂದಿಗೆ ಅನೌಪಚಾರಿಕ ಮಾತುಕತೆ ನಡೆಯಿತು. ಭಾಗವಹಿಸಿದ್ದ ಎಲ್ಲಾ ಶಿಕ್ಷಕರು ಇತ್ತೀಚೆಗೆ ತರಬೇತಿಗಳು ಅರ್ಥವನ್ನು ಕಳೆದುಕೊಳ್ಳುತ್ತಿವೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿದರು. ತರಬೇತಿಗಳು ಶಿಕ್ಷಕರಿಗೆ ರುಚಿಸುತ್ತಿಲ್ಲ. ನನಗೆ ತಿಳಿದ ಹಾಗೆ ಇದಕ್ಕೆ ಕಾರಣಗಳು ಹಲವಾರು. ಮೊದಲನೆಯದಾಗಿ ತರಬೇತಿ ಕೇಂದ್ರಗಳಲ್ಲಿ ಎದ್ದು ಕಾಣುವ ಶಿಸ್ತಿನ ಕೊರತೆ. ಡಯಟ್‌ನಿಂದ ಸಿ.ಆರ್.ಸಿ. ಗಳವರೆಗೂ ಇದೇ ಪರಿಸ್ಥಿತಿ ಇದೆ. ಡಿ.ಪಿ.ಇ.ಪಿ ಮತ್ತು ಸರ್ವ ಶಿಕ್ಷಣ ಅಭಿಯಾನ ಪ್ರಾರಂಭವಾದ ಹೊಸತರಲ್ಲಿ ಬಿ.ಆರ್.ಸಿ. ಕೇಂದ್ರಗಳಲ್ಲಿ ನಡೆಯುತ್ತಿದ್ದ ತರಬೇತಿಗಳು ಆಸಕ್ತಿದಾಯಕವಾಗಿರುತ್ತಿದ್ದವು ಮತ್ತು ಉತ್ಸಾಹಭರಿತ ವಾತಾವರಣವನ್ನು ಹೊಂದಿರುತ್ತಿದ್ದವು. ಸಾಮಾನ್ಯವಾಗಿ 32 ಶಿಕ್ಷಕರ ಗುಂಪುಗಳಲ್ಲಿ ತರಬೇತಿಗೆ ಬರುತ್ತಿದ್ದರು. ಎಲ್ಲಾ ಶಿಕ್ಷಕರೂ ಸಹ ಆಸಕ್ತಿಯಿಂದ ಸಮಯಕ್ಕೆ ಸರಿಯಾಗಿ ಹಾಜರಾಗುತ್ತಿದ್ದರು ಮತ್ತು ಅಷ್ಟೇ ಉತ್ಸಾದಿಂದ ತರಬೇತಿಯಲ್ಲಿ ಭಾಗವಹಿಸುತ್ತಿದ್ದರು. ಅರ್ಥಪೂರ್ಣ ಚರ್ಚೆಗಳಾಗುತ್ತಿದ್ದವು ಹಾಗೂ ತರಬೇತಿ ಮುಗಿಯುವವರೆಗೂ ಎಲ್ಲಾ ಶಿಕ್ಷಕರು ಹಾಜರಿರುತ್ತಿದ್ದರು. ತರಬೇತಿ ಕೊಠಡಿಯ ಹೊರಗೂ ಬಿಸಿ ಬಿಸಿ ಚರ್ಚೆಗಳಾಗುತ್ತಿದ್ದವು. ತರಬೇತಿ ಮುಗಿಸಿ ಹೊರ ಬರುವಾಗ ಅವರ ಮುಖಗಳಲ್ಲಿ ಸಾರ್ಥಕತೆಯ ಭಾವ ಮತ್ತು ಏನೋ ಒಂದು ಬಗೆಯ ಕಾಂತಿ ಎದ್ದು ಕಾಣುತ್ತಿತ್ತು. ಮನೆಗಳಿಗೆ ಹೋಗುವಾಗ ಬಸ್‌ಗಳಲ್ಲಿಯೂ ತರಬೇತಿಯಲ್ಲಿನ ವಿಷಯಗಳು, ಅವುಗಳ ಮಂಡನೆ, ಅದರ ಸಫಲತೆ ಮತ್ತು ಗುಣಮಟ್ಟಗಳ ಕುರಿತಾಗಿ ಚರ್ಚೆಗಳಾಗುತ್ತಿದ್ದವು. ಆದರೆ ಮೂರನೆಯ ವರ್ಷದಿಂದ ತರಬೇತಿಗಳ ಗುಣಮಟ್ಟ ಕ್ರಮೇಣ ಕುಸಿಯತೊಡಗಿತು ಮತ್ತು ಇಂದು ಅವು ಯಾವ ಮಟ್ಟ ತಲುಪಿವೆಯೆಂದರೆ ಶಿಕ್ಷಕರು ತರಬೇತಿ ಕೊಠಡಿಯೊಳಕ್ಕೂ ಬರಲು ಬಯಸುತ್ತಿಲ್ಲ.

2001 ರಲ್ಲಿ ನಾನು ಪ್ರಥಮ ಬಾರಿಗೆ ಬಿ.ಆರ್.ಸಿ. ಮಟ್ಟದಲ್ಲಿ ತರಬೇತಿ ನೀಡಿದಾಗ ಸಾಕಷ್ಟು ಅಧ್ಯಯನ ಮತ್ತು ಪೂರ್ವ ತಯಾರಿ ಮಾಡಿದ್ದೆ. ಶಿಕ್ಷಕರೂ ಸಹ ಸಾಕಷ್ಟು ಪ್ರಶ್ನೆಗಳನ್ನು ಕೇಳಿದರು. ಹೆಚ್ಚು ಕಡಿಮೆ 2004–05 ರವರೆಗೆ ಇದೇ ಪರಿಸ್ಥಿತಿಯಿತ್ತು. ಈ ಅವಧಿಯಲ್ಲಿ ನಾನು ಅಧ್ಯಯನದಿಂದ ಮತ್ತು ಅನುಭವದಿಂದ ಪಡೆದ ಜ್ಞಾನವನ್ನು ಎಲ್ಲರೊಂದಿಗೆ ಹಂಚಿಕೊಳ್ಳಲು ಸತತ ಪ್ರಯತ್ನ ಮಾಡಿದೆ. ಈ ಸಮಯದಲ್ಲಿ 'ಏಕಲವ್ಯ' ದಲ್ಲಿ ಪ್ರಕಟವಾಗುತ್ತಿದ್ದ 'ಸ್ರೋತ್ರಗಳು' ಅಂಕಣ ತುಂಬಾ ಸಹಕಾರಿಯಾಯಿತು.

ನಾನು ಈ ಮಾಸಪತ್ರಿಕೆಯ ಹಳೆಯ ಸಂಚಿಕೆಗಳಿಂದ ವಿಷಯಕ್ಕೆ ಪೂರಕವಾದ ಮತ್ತು ಪ್ರಮುಖವೆನಿಸಿದ ಲೇಖನಗಳನ್ನು ಸಂಗ್ರಹಿಸಿ ತರಬೇತಿ ವೇಳೆಯಲ್ಲಿ ಶಿಕ್ಷಕರಿಗೆ ನೀಡಿ ಅವುಗಳ ಬಗ್ಗೆ ಚರ್ಚಿಸುತ್ತಿದ್ದೆ.

ಸಮರ್ಪಣ ಭಾವದಿಂದ ಶ್ರಮವಹಿಸಿ ಹಾಗು ಆಸಕ್ತಿಯಿಂದ ಮಾಡಿದ ಕೆಲಸದಿಂದ ನನಗೂ ತುಂಬಾ ಲಾಭವಾಯಿತು. ಒಂದು ಕಡೆ ನಾನು ವಿಷಯಜ್ಞಾನಗಳಿಸುವುದರ ಜತೆಗೆ ಅದನ್ನು ಆಸಕ್ತಿಕರವಾಗಿ ಪ್ರಸ್ತುತಪಡಿಸುವ ಕೌಶಲ ಬೆಳೆಸಿಕೊಂಡೆ. ಇದರಿಂದ ನನಗೆ ಒಳ್ಳೆಯ ಹೆಸರು ಮತ್ತು ಪ್ರಶಂಸೆ ಲಭಿಸಿತು. ಇನ್ನೊಂದು ಕಡೆ ನಾನು ಅಧಿಕಾರಿಗಳಿಂದ ಸಂಪನ್ಮೂಲ ವ್ಯಕ್ತಿಯಾಗಿ ಗುರ್ತಿಸಲ್ಪಟ್ಟೆ. ಇದರಿಂದ ನನಗೆ ರಾಜ್ಯ ಮಟ್ಟದ ಸಂಪನ್ಮೂಲ ವ್ಯಕ್ತಿಯಾಗಲು ಅವಕಾಶ ದೊರೆಯಿತು, ಮತ್ತು ನಾನು ಕ್ರಮೇಣ ಬ್ಲಾಕ್ ಮಟ್ಟದಿಂದ ರಾಜ್ಯ ಮಟ್ಟದಲ್ಲಿ ಕಾರ್ಯ ನಿರ್ವಹಿಸಲು ಸಾಧ್ಯವಾಯಿತು.

ತರಬೇತಿ ಕೊನೆಯ ದಿನ ಈ ತರಬೇತಿ ಇನ್ನು ಸ್ವಲ್ಪ ದಿನ ಇರಬಾರದಿತ್ತೆ? ಎನಿಸುತ್ತಿತ್ತು. ತರಬೇತಿಗಳು ಶೈಕ್ಷಣಿಕ ವಿಷಯಗಳನ್ನು ಚರ್ಚಿಸುವುದರ ಜೊತೆಗೆ ಶಿಕ್ಷಕರನ್ನು ಭಾವನಾತ್ಮಕವಾಗಿ ಒಂದುಗೂಡಿಸುತ್ತವೆ. ಶಿಕ್ಷಕರು ಹೊಸ ಹೊಸ ಗೆಳೆತನ ಬೆಳೆಸಿಕೊಳ್ಳುತ್ತಾರೆ. ತಮ್ಮ ನೋವು, ನಲಿವು ಮತ್ತು ಸಾಧನೆಗಳನ್ನು ಪರಸ್ಪರ ಹಂಚಿಕೊಂಡು ಹತ್ತಿರವಾಗುತ್ತಾರೆ. ಇವೆಲ್ಲಾ ಸೇರಿ ತರಬೇತಿ ಒಂದು ಮಧುರವಾದ ಅನುಭವವನ್ನುಂಟು ಮಾಡುತ್ತಿತ್ತು. ಅಧಿಕಾರಿಗಳೂ ಸಹ ಎರಡನೆಯ ದಿನ ಅಥವಾ ಮೂರನೆಯ ದಿನ ಬಂದು ತರಬೇತಿಯಲ್ಲಿ ಕುಳಿತು ವಿಷಯಗಳನ್ನು ಆಲಿಸುತ್ತಿದ್ದರು ಮತ್ತು ಚರ್ಚೆಗಳಲ್ಲಿ ಭಾಗವಹಿಸುತ್ತಿದ್ದರು. ಹೀಗೆ ಅವರೂ ಸಹ ತರಬೇತಿಯ ಒಂದು ಭಾಗವಾಗುತ್ತಿದ್ದರು. ಅಧಿಕಾರಿಗಳಿಗೆ ಪರಿಚಯವಾಗಿರದ ಅಥವಾ ಅಧಿಕಾರಿಗಳನ್ನು ನೋಡಿರದ ಶಿಕ್ಷಕರು ಈ ತರಬೇತಿಗಳ ಮೂಲಕ ಅಧಿಕಾರಿಗಳಿಗೆ ಪರಿಚಯವಾಗುತ್ತಿದ್ದರು. ಒಂದು ರೀತಿಯಲ್ಲಿ ಅಧಿಕಾರಿಗಳೂ ನಮ್ಮ ಸಹೋದ್ಯೋಗಿ ಮಿತ್ರರಂತಾಗುತ್ತಿದ್ದರು.

ಆದರೆ ಇಂದು ತರಬೇತಿಗಳ ಸ್ಥಿತಿ ನೋಡುತ್ತಿದ್ದರೆ ನನಗೆ ತುಂಬಾ ನೋವಾಗುತ್ತದೆ. ಶಿಕ್ಷಣ ಇಲಾಖೆಗೆ ಭಾರವಾಗಿರುವ ಕೆಲವರು ಈಗ ಶಿಕ್ಷಕರ ನೇತಾರರಾಗಿಬಿಟ್ಟಿದ್ದಾರೆ. ಅವರು ಹಿಂದೆಯೂ ಇದ್ದರು ಆದರೆ ಎಲ್ಲರೂ ಸಕ್ರಿಯವಾಗಿ ಭಾಗವಹಿಸುತ್ತಿದ್ದುದರಿಂದ ಅವರೂ ಸರಿಯಾದ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದರು. ಅವರು ಒಮ್ಮೊಮ್ಮೆ ಹಾಜರಾಗದಿದ್ದರೂ ಅದು ಗೌಣವಾಗಿ ಬಿಡುತ್ತಿತ್ತು. ಯಾರೂ ಅದರ ಬಗ್ಗೆ ಗಮನಹರಿಸುತ್ತಿರಲಿಲ್ಲ. ಆದರೆ ಈಗ ಅವರೇ ನಮ್ಮ ಆದರ್ಶ ವ್ಯಕ್ತಿಗಳಾಗಿಬಿಟ್ಟಿದ್ದಾರೆ. ಜತೆಗೆ ಈಗ ಎಲ್ಲರೂ ಪ್ರಶ್ನಿಸುತ್ತಾರೆ– ಅವರು ಯಾಕೆ ಬರುವುದಿಲ್ಲ? ಅವರಿಗೆ ಮಾತ್ರ ಏಕೆ ರಿಯಾಯಿತಿ? ಅವರಿಗೆ ಏನೂ ಅಗುವುದಿಲ್ಲವೆಂದ ಮೇಲೆ ನಾವು ಮಾತ್ರ 5 ಗಂಟೆಗಳ ಕಾಲ ಕುಳಿತು ಸಮಯವನ್ನೇಕೆ ಹಾಳು ಮಾಡಿಕೊಳ್ಳಬೇಕು?

ಇಂದಿನ ಈ ಪರಿಸ್ಥಿತಿಗೆ ನಮ್ಮ ಇಡೀ ವ್ಯವಸ್ಥೆಯೇ ಕಾರಣವಾಗಿದೆ. ಸಿ.ಆರ್.ಸಿ. ಸಂಯೋಜಕರಿಂದ ಡಯಟ್ ಪ್ರಾಂಶುಪಾಲರು ಹಾಗೂ ಅವರ ಮೇಲಧಿಕಾರಿಗಳೂ ಸಹ ಕಾರಣರಾಗಿದ್ದಾರೆ.

ಇನ್ನು ತರಬೇತಿಗಳು ಹಾಳಾಗಲು ಎರಡನೆಯ ಮುಖ್ಯ ಕಾರಣ ಭ್ರಷ್ಟಾಚಾರ. ತರಬೇತಿಗಳಿಗೆ ಬರುವ ಹಣಕ್ಕಾಗಿ ಇಡೀ ವ್ಯವಸ್ಥೆಯೇ ಭ್ರಷ್ಟವಾಗಿದೆ. ತರಬೇತಿಗಳ ಉದ್ದೇಶ ಶಿಕ್ಷಣದ ಗುಣಮಟ್ಟವನ್ನು ಅಭಿವೃದ್ಧಿಗೊಳಿಸುವುದಾಗಿರದೆ ಹಣ ಮಾಡುವುದಾಗಿದೆ. ಎಲ್ಲರ ಕಣ್ಣು ತರಬೇತಿಗಳಿಗಾಗಿ ಬರುವ ದೊಡ್ಡ ಮೊತ್ತದ ಮೇಲೆಯೇ ಇರುತ್ತದೆ. ಇದೇ ಕಾರಣಕ್ಕೆ ಮೊದಲೆಲ್ಲ ತರಬೇತಿಗಳನ್ನು ಅಯೋಜಿಸಲು ಡಯಟ್ ಮತ್ತು ಬಿ.ಆರ್.ಸಿ. ನಡುವೆ ದೊಡ್ಡ ಪೈಪೋಟಿಯೇ ಇರುತ್ತಿತ್ತು. ಆದರೆ ಆಡಳಿತ ವಿಕೇಂದ್ರೀಕರಣ ನೀತಿಯಿಂದಾಗಿ ಗೆಲುವು ಬಿ.ಆರ್.ಸಿ.ಗಳ ಪಾಲಾಯಿತು. ಎರಡು ಮೂರು ವರ್ಷಗಳವರೆಗೂ ತರಬೇತಿಗೆ 32ರ ಗುಂಪುಗಳಲ್ಲೇ ಕರೆಯುತ್ತಿದ್ದರು. ನಂತರ ಬಿ.ಆರ್.ಸಿ.ಗೆ 90ರ ಗುಂಪುಗಳಲ್ಲಿ ಕರೆಯತೊಡಗಿದರು. ಇಂತಹ ಸನ್ನಿವೇಶದಲ್ಲಿ ತರಬೇತಿಯ ಗುಣಮಟ್ಟವನ್ನು ಎಂಥವರಾದರೂ ಊಹಿಸಬಹುದು. ತರಬೇತಿಗೆ ಗೈರು ಹಾಜರಾಗುವುದು ತಮ್ಮ ಮೂಲಭೂತ ಹಕ್ಕು ಎಂದು ಭಾವಿಸುವವರು ಮತ್ತು ತರಬೇತಿಗೆ ಪೂರ್ಣ ಪ್ರಮಾಣದಲ್ಲಿ ಹಾಜರಿರುವುದು ತಮ್ಮ ಘನತೆಗೆ ಸರಿಹೊಂದುವುದಿಲ್ಲ ಎಂಬ ಮನೋಭಾವವುಳ್ಳವರು ಇಂತಹ ಪರಿಸ್ಥಿತಿಯ ಲಾಭ ಪಡೆದುಕೊಳ್ಳಲು ಪ್ರಾರಂಭಿಸಿದರು. ಇಲ್ಲಿ ಹಣ ತುಂಬಾ ಮಹತ್ವದ ಪಾತ್ರವಹಿಸಿತು.



ಇದು ಹೇಗಾಯಿತೆಂದರೆ– ಗೈರು ಹಾಜರಾಗುವವರು ಹೋಗಿ ಬಿ.ಆರ್.ಸಿ ಸಂಯೋಜಕರನ್ನು ಭೇಟಿಯಾಗಿ "ನೀವು ನಮ್ಮ ಟಿ.ಎ/ಡಿ.ಎ ತೆಗೆದುಕೊಳ್ಳಿ, ನಮ್ಮ ಪರವಾಗಿ ನೀವೇ ಸಹಿ ಮಾಡಿಬಿಡಿ"ಎಂದು ಹೇಳುತ್ತಾರೆ. ಅಷ್ಟೆ ಸಾಕು ಸಂಯೋಜಕರಿಗೂ ಖುಷಿ, ಶಿಕ್ಷಕರಿಗೂ ಖುಷಿ. ಸಂಜೆ ಎಲ್ಲ ಶಿಕ್ಷಕರು ತೆರಳಿದ ನಂತರ ಸಂಯೋಜಕರು ಗೈರು ಹಾಜರಿದ್ದ ಶಿಕ್ಷಕರ ನಕಲಿ ಸಹಿ ಮಾಡಿಬಿಡುತ್ತಾರೆ. ಹಣವೂ ಉಳಿಯುತ್ತದೆ, ದಿನಸಿಯೂ ಉಳಿಯುತ್ತದೆ. ಹೀಗೆ ಸಂಯೋಜಕರು ಸಾಕಷ್ಟು ಹಣ ಗಳಿಸುತ್ತಾರೆ. ಬಿ.ಆರ್.ಸಿ ಮತ್ತು ಸಿ.ಆರ್.ಸಿ. ಸಂಯೋಜಕರು ತಮ್ಮ ಮೇಲಧಿಕಾರಗಳಿಗೂ ಪಾಲು ಕೊಡಬೇಕೆಂದು ಆಗಾಗ ತಮ್ಮ ಅಳಲನ್ನು ತೋಡಿಕೊಳ್ಳುತ್ತಿರುತ್ತಾರೆ. ಅವರು ಹೇಳುವ ಪ್ರಕಾರ ಜಿಲ್ಲಾ ಸಂಯೋಜಕರು, ಪ್ರಾಥಮಿಕ ಶಿಕ್ಷಣಾಧಿಕಾರಿಗಳು(ಬಿ.ಎಸ್.ಎ) ಮತ್ತು ಡಯಟ್ ಪ್ರಾಂಶುಪಾಲರು ಎಲ್ಲರೂ ಈ ದಂಧೆಯಲ್ಲಿ ಪಾಲುದಾರರೇ.

## 15–ಆಗಸ್ಟ್–2007

ಇಂದು ಸರಿಯಾಗಿ 6–30ಕ್ಕೆ ಶಾಲೆ ತಲುಪಿದೆ. ಮಕ್ಕಳು ಒಬ್ಬೊಬ್ಬರಾಗಿ ಬರುತ್ತಿದ್ದರು. ಸುಮಾರು 7 ಗಂಟೆಯ ವೇಳೆಗೆ ಎಲ್ಲ ಮಕ್ಕಳು ಹಾಜರಾದರು. ಇಂದು ಎಲ್ಲಾ ಮಕ್ಕಳು ಹಾಜರಾಗಿದ್ದರು. ಎಲ್ಲಾ 63 ಮಕ್ಕಳೂ ಶುಭ್ರವಾದ ಯೂನಿಫಾರ್ಮ್ ಧರಿಸಿ ಶಾಲೆಗೆ ಬಂದಿದ್ದರು. ಇವರ ಜತೆಗೆ ಪಕ್ಕದ ಲೋದು ಮತ್ತು ಡೌರಾದ ವಿದ್ಯಾ ಕೇಂದ್ರದ ಮಕ್ಕಳು, ಅವರ ಸಹೋದರ ಸಹೋದರಿಯರು ಹಾಗೂ ಇನ್ನೂ ಶಾಲೆಗೆ ದಾಖಲಾಗದ ಕೆಲವು ಮಕ್ಕಳು ಬಂದಿದ್ದರು. ಎಲ್ಲಾ ಸೇರಿ ಒಟ್ಟು 90ಕ್ಕೂ ಹೆಚ್ಚು ಮಕ್ಕಳಿದ್ದರು.

ವಿಮಲಾ ಮತ್ತು ದರ್ಶಿನಿ, ಇಬ್ಬರು ಶಿಕ್ಷಕಿಯರ ಜತೆ ಮಕ್ಕಳನ್ನು ಊರೊಳಗೆ ಪ್ರಭಾತ್ ಫೇರಿಗೆ ಕಳುಹಿಸಿ ನಾನು ಧ್ವಜಾರೋಹಣದ ಸಿದ್ಧತೆ ಮಾಡತೊಡಗಿದೆ. ನಾನು ಒಂದು ಗುಂಡಿ ತೋಡಿ, ಧ್ವಜವನ್ನು ಹಾರಿಸಲು ಇದ್ದ ಉದ್ದನೆಯ ಪೈಪ್ ಒಂದಕ್ಕೆ ಧ್ವಜವನ್ನು ಕಟ್ಟಿ ಅದರೊಳಗೆ ನೆಟ್ಟೆ. 7–45ಕ್ಕೆ ಮಕ್ಕಳು ಪ್ರಭಾತ್ ಫೇರಿಯಿಂದ ಹಿಂತಿರುಗಿದರು. ಅಷ್ಟರಲ್ಲಿ ಕೆಲವು ಪೋಷಕರೂ, ಸಿಹಿ ತೆಗದುಕೊಂಡು ಬಂದಿದ್ದರು. ನಾನೂ ಸಹ ಬರುವಾಗ 4 ಕಿ.ಗ್ರಾಂ. ಸಿಹಿ ತಂದಿದ್ದೆ.

ಧ್ವಜಾರೋಹಣದ ನಂತರ ಮಕ್ಕಳು, ಪೋಷಕರು ಮತ್ತು ನಾವು ಅಂದರೆ ಶಿಕ್ಷಕ ವೃಂದದವರು ಎಲ್ಲರೂ ಜೂನಿಯರ್ ಹೈಸ್ಕೂಲ್‌ಗೆ ಹೊರಟೆವು. ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಜೂನಿಯರ್ ಹೈಸ್ಕೂಲ್ ಆವರಣದಲ್ಲಿ ನಡೆಸಲಾಗುತ್ತಿತ್ತು. ಅದು ನಮ್ಮ ಶಾಲೆಯಿಂದ ಅರ್ಧ ಕಿ.ಮೀ. ದೂರದಲ್ಲಿತ್ತು. ಶಾಲೆಗೆ ಆಗಮಿಸಿದ್ದ ಗ್ರಾಮ ಪ್ರಧಾನರು ನಮ್ಮೊಡನೆ ಬಂದರು.

ನಮ್ಮ ಶಾಲೆಯಲ್ಲೇ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಬೇಕೆಂಬುದು ಮಕ್ಕಳ ಅಭಿಮತ. ಕೆಲವು ಮಕ್ಕಳು ಜೂನಿಯರ್ ಹೈಸ್ಕೂಲ್‌ಗೆ ಬರಲು ವಿರೋಧವನ್ನೂ ವ್ಯಕ್ತಪಡಿಸಿದರು. ಆದರೆ ಕೊನೆಗೆ ನನ್ನ ಒತ್ತಾಯಕ್ಕೆ ಮಣಿದು ರಾಜಿಯಾದರು. ಮಕ್ಕಳಿಗೆ ಇಷ್ಟವಿಲ್ಲದಿದ್ದರೂ ನಾನು ಅವರನ್ನು ಬೇರೆ ಶಾಲೆಗೆ ಕರೆದುಕೊಂಡು ಹೋಗುವುದು ಅನಿವಾರ್ಯವಾಗಿತ್ತು.

ಸ್ವಾತಂತ್ರ್ಯ ದಿವಸದಿಂದ ನನ್ನ ದಿನಚರಿ ಹೀಗಿತ್ತು.

1. ಆಗಸ್ಟ್ 15 ರಂದು ಮೊದಲು ನಾನು ಶಾಲೆಗೆ ಹೋಗಿ ನಂತರ ಡೆಹ್ರಾಡೂನ್‌ಗೆ ಹೋದೆ. ಕಲಿಕಾ ಖಾತ್ರಿ ಯೋಜನೆಗೆ ಚಟುವಟಿಕೆಗಳನ್ನು ರೂಪಿಸುವ ಕಾರ್ಯಾಗಾರದಲ್ಲಿ ಅನೌಪಚಾರಿಕವಾಗಿ ಪಾಲ್ಗೊಂಡಿದ್ದೆ.
2. 16 ರಿಂದ 18ರ ವರೆಗೆ ತರಬೇತಿಯಲ್ಲಿದ್ದೆ.
3. 19 ರಂದು ತರಬೇತಿಯಿಂದ ವಾಪಸ್ಸಾದೆ.
4. 19 ರಂದು ಚಿನ್ಯಾಲಿ ಸೌಧದಲ್ಲಿ ನನಗೆ ಪುರಸ್ಕಾರ ಪ್ರದಾನ ಮಾಡುವ ಕಾರ್ಯಕ್ರಮವಿತ್ತು. ಆದರೆ ನನಗೆ ಮುಂಚಿತವಾಗಿ ವಿಷಯ ತಲುಪಿರಲಿಲ್ಲ.

## ಬಾಲಪತ್ರಿಕೆ ಮತ್ತು ನಾನು

ಯಾವುದೇ ಬಾಲಪತ್ರಿಕೆ ಎತ್ತಿಕೊಂಡರೂ
ಒಡನೆ ನನ್ನ ಗತಕ್ಕೆ ಜಾರುವೆನು
ಬಹಳ ದೂರ, ಅಂತರಂಗದ ಆತೀತದೊಳಗೆ!

ಮಾನಸ ಪಟಲದಲಿ ಸಾಗುತ್ತವೆ ದೃಶ್ಯಗಳು
ಒಂದರ ಮೇಲೊಂದು; ಚಲನಚಿತ್ರದಂತೆ.
ಉದ್ಯಾನವನ, ಸಾಗರತೀರ,
ಧೂಳು ತುಂಬಿದ ಬಟ್ಟೆಗಳು,
ಕಣ್ಣಾಮುಚ್ಚಾಲೆ, ಕಳ್ಳ ಪೊಲೀಸ್ ಆಟ
ಇಂದು ಜಗಳ ನಾಳೆಗೆ ಒಡನಾಟ!

ತಾಯಿಯ ಮಮತೆ ತಂದೆಯ ಒಲವು
ನೆನಪಾಗುತ್ತವೆ ಮತ್ತೆ ಮತ್ತೆ
ಗೃಹಪಾಠದ ಒತ್ತಡ, ಜತೆಗೆ
ಗುರುಗಳ ಬೈಗುಳ, ಆಗಾಗ
ಹೊರಸಂಚಾರದ ಮಜಾ!

ಇನ್ನೂ ಎಷ್ಟೋ ನೆನಪುಗಳು ಮನದೊಳಗೆ
ಕೋಮಲ ಬಾಲ್ಯದ ಮನಮೋಹಕ ದಿನಗಳು.
ಈಗ ಸಾವಿರ ಯತ್ನವ ಮಾಡಿದರೂ
ಪಡೆಯಬಲ್ಲೆನೆ ಮತ್ತೆ ಆ ದಿನಗಳನು?



**20–ಆಗಸ್ಟ್–2007**

ಸೋಮವಾರ ನಾನು ಸೇವಾ ನಿರತ ಶಿಕ್ಷಕರ ತರಬೇತಿಗಾಗಿ ಗೊರಸಾಡಕ್ಕೆ ಹೋದೆ. ಮಾರ್ಗ ಮಧ್ಯದಲ್ಲಿ ಎನ್.ಪಿ.ಆರ್.ಸಿ. ಸಂಯೋಜಕರಾದ ಶ್ರೀ ರಾಜೇಂದ್ರ ಪ್ರಸಾದ್‌ರವರ ಕರೆ ಬಂತು. ಅವರು ಇಂದು ಪ್ರಾಥಮಿಕ ಶಿಕ್ಷಣಾಧಿಕಾರಿಗಳು (Basic Shiksha Adhikari-B.S.A.) ಭೇಟಿ ನೀಡಲಿದ್ದಾರೆ ಎಂದು ತಿಳಿಸಿದರು. ತರಬೇತಿ ಸ್ಥಳಕ್ಕೆ ತಲುಪಿದಾಗ ಜಿಲ್ಲಾ ಶಿಕ್ಷಣ ಸಮನ್ವಯಾಧಿಕಾರಿಗಳು ಮತ್ತು ಬಿ.ಆರ್.ಸಿ ಸಂಯೋಜಕರ ಜತೆ ಅಪರ ಜಿಲ್ಲಾ ಶಿಕ್ಷಣಾಧಿಕಾರಿಗಳು ಗಡಥಾತಿ ಜೂನಿಯರ್ ಹೈಸ್ಕೂಲ್‌ಗೆ ಹೋಗಿದ್ದರು.

ತರಬೇತಿಗೆ 13 ಶಿಕ್ಷಕರ ಪೈಕಿ 4 ಜನ ಮಾತ್ರ ಬಂದಿದ್ದರು. ಇದರಲ್ಲಿ ವಿಶೇಷವೇನೂ ಇಲ್ಲ ಏಕೆಂದರೆ ದಿನವೂ ಇದೇ ಪರಿಸ್ಥಿತಿ. ಹೀಗಿರುವಾಗ ವಿಶೇಷವಾಗಿ ಏನೂ ತಿಳಿಸುವ ಮನಸ್ಸಾಗುವುದಿಲ್ಲ. ಕೊನೆಗೆ ಇದ್ದ 6 ಶಿಕ್ಷಕರಲ್ಲಿ ಯಾರೂ ಚರ್ಚಿಸುವ ಪ್ರಯತ್ನವನ್ನೂ ಮಾಡುತ್ತಿರಲಿಲ್ಲ. ನಾನು ಇದ್ದ 6 ಶಿಕ್ಷಕರಿಗೆ ಮೌಲ್ಯಮಾಪನದ ನಮೂನೆಗಳನ್ನು ಕೊಟ್ಟು ಮೌಲ್ಯಮಾಪನವನ್ನು ಹೇಗೆ ಉತ್ತಮಗೊಳಿಸಬಹುದು ಮತ್ತು ಮಾಪನ ಮಾಡುವ ವಿಧಾನಗಳ ಕುರಿತು ಚರ್ಚೆ ಮಾಡಿದೆ. ಒಂದು ಗಂಟೆಗೆ ಊಟದ ವಿರಾಮಕ್ಕೆ ಬಿಡಲಾಯಿತು ಮತ್ತು ಅಲ್ಲಿಗೆ ಇಂದಿನ ತರಬೇತಿ ಮುಕ್ತಾಯವಾಯಿತು.

ತರಬೇತಿಗಳ ರುಚಿ ಕ್ರಮೇಣ ಇಳಿಮುಖವಾಗುತ್ತಿದೆ. ಈ ತರಬೇತಿಯಲ್ಲಿ 25ಕ್ಕೂ ಹೆಚ್ಚು ಶಿಕ್ಷಕರು ಪಾಲ್ಗೊಳ್ಳಬೇಕಾಗಿತ್ತು. ಆದರೆ ಜಿಲ್ಲಾ ಕೇಂದ್ರದಿಂದ ಬಂದು ಹೋಗುತ್ತಿದ್ದ ಕೆಲವರಿಗೆ ಬಿ.ಆರ್.ಸಿ. ಕೇಂದ್ರದಲ್ಲೇ ತರಬೇತಿ ನೀಡುವ ವ್ಯವಸ್ಥೆ ಮಾಡಿದರು. ಹಾಗಾಗಿ ಎನ್.ಪಿ.ಆರ್.ಸಿ. ಕೇಂದ್ರದಲ್ಲಿ ನಡೆದ ತರಬೇತಿಗೆ ಶಿಕ್ಷಕರ ಸಂಖ್ಯೆ ಕಡಿಮೆಯಾಯಿತು. ಇಲ್ಲಿ ಯಾವುದೇ ನೀತಿ ನಿಯಮಗಳನ್ನು ರೂಪಿಸಿಲ್ಲದ ಕಾರಣ ಅಶಿಸ್ತು ಎದ್ದು ಕಾಣುತ್ತಿತ್ತು. ಯಾರಿಗೆ ಯಾವಾಗ ಬರಬೇಕೆನಿಸುತ್ತದೋ ಆಗ ಬರುತ್ತಾರೆ, ಹೋಗಬೇಕೆನಿಸಿದಾಗ ಹೋಗುತ್ತಾರೆ. ಕೆಲವರು ಪ್ರಾರಂಭದ ದಿನ ಬಂದರೆ ನಂತರ ಅವರ ದರ್ಶನವಾಗುವುದು ಕೊನೆಯ ದಿನವೇ. ಯಾರು ನಿಯಮಿತವಾಗಿ ಬರುತ್ತಾರೋ ಅವರಿಗೆ ವ್ಯವಸ್ಥೆ ಕುರಿತು ಆಕ್ರೋಶ ಮತ್ತು ತರಬೇತಿಗಳ ಬಗ್ಗೆ ಉಪೇಕ್ಷೆ ಉಂಟಾಗುವುದು ಸಹಜ. ಬಹುಶಃ ಈಗ ತರಬೇತಿಗಳ ಗುಣಮಟ್ಟವನ್ನು ಸರಿದಾರಿಗೆ ತರುವ ಸಂಭವವೂ ಇಲ್ಲ.

ಎರಡು ಗಂಟೆಗೆ ಧೌಂತರಿಯಲ್ಲಿನ ಮನೆ ತಲುಪುವ ವೇಳೆಗೆ ಇಬ್ಬರು ಯುವಕರು ನನಗಾಗಿ ಕಾಯುತ್ತಿದ್ದರು. ಅವರಿಗೆ 10 ವರ್ಷಗಳ ಹಿಂದಿನ ತಮ್ಮ ಪತ್ನಿಯರ 5ನೇ ತರಗತಿಯ ಅಂಕಪಟ್ಟಿಯ ನಕಲು ಬೇಕಾಗಿತ್ತು. 2–30ಕ್ಕೆ ಶಾಲೆ ಕಡೆ ಹೊರಟೆ. ದಾರಿಯಲ್ಲಿ ಬಿ.ಎಸ್.ಎ ಸಾಹೇಬರು ಸಿಕ್ಕರು. ನನ್ನನ್ನು ನಿಲ್ಲಿಸಿದರು ಮತ್ತು ನಮ್ಮ ಶಾಲೆಗೆ ಭೇಟಿ ನೀಡಿ ಬರುತ್ತಿರುವುದಾಗಿ ಹೇಳಿದರು. ಆದರೆ ಅಷ್ಟರಲ್ಲಿ ಶಾಲೆಯ ಅವಧಿ ಮುಗಿದಿತ್ತು. ಹಾಗಾಗಿ ಅವರು ಬಹುಶಃ ಹೊರಗಡೆಯಿಂದಲೇ ಶಾಲೆ ನೋಡಿ ಬಂದಿರಬೇಕು.

ಅವರು ವ್ಯಂಗ್ಯವಾಗಿ ಹೇಳಿದರು–"ನಿಮ್ಮ ಶಾಲೆ ತುಂಬಾ ಚೆನ್ನಾಗಿದೆ. ನಿಮ್ಮ ಶಾಲಾ ಆವರಣದಲ್ಲಿ ಬೆಳೆದಿದ್ದ ಹೂಗಳನ್ನು ನೋಡಿ ತುಂಬಾ ಖುಷಿಯಾಯಿತು. ನೀನೂ ಸಹ ತುಂಬಾ ಚೆನ್ನಾಗಿ ಕೆಲಸ ಮಾಡಿದ್ದೀಯ. ಶಾಲೆಯ ಗೋಡೆಗಳಿಗೆ ಚೆನ್ನಾಗಿ ಸುಣ್ಣ ಬಳಿಸಿದ್ದೀಯ. ಶಾಲಾ ಸ್ವಚ್ಛತೆಯನ್ನಂತೂ ಮೆಚ್ಚಲೇಬೇಕು". ನನಗೆ ತಿಳಿಯಿತು ಇದೆಲ್ಲಾ ವ್ಯಂಗವಾಗಿ ಹೇಳುತ್ತಿರುವ ಮಾತುಗಳು. ಆದರೂ ನಾನು ಸುಮ್ಮನಿದ್ದೆ. ಇತ್ತೀಚೆಗೆ ಮಳೆಗಳಾಗುತ್ತಿರುವುದರಿಂದ ಆವರಣದಲ್ಲೆಲ್ಲಾ ಸಣ್ಣ ಪುಟ್ಟ ಗಿಡ ಗಂಟಿಗಳು ಬೆಳೆದಿವೆ. ಚೈಲ್ಡ್ ಫ್ರೆಂಡ್ಲಿ (ಬಾಲ ಸ್ನೇಹಿ) ಯೋಜನೆಯಡಿ ಒಂದು ಕೊಠಡಿ ನಿರ್ಮಾಣವಾಗುತ್ತಿರುವುದರಿಂದ ಮೈದಾನದಲ್ಲೆಲ್ಲ ಒಣ ಮರ, ಸಿಮೆಂಟ್, ಜಲ್ಲಿ ಕಲ್ಲು, ಮರಳು ಇತ್ಯಾದಿಗಳು ಇದ್ದವು. ಮಕ್ಕಳು ಆಟವಾಡಿರುವುದರಿಂದ ಚೆಲ್ಲಾಪಿಲ್ಲಿಯಾಗಿರಬೇಕು ಇದರಿಂದ ಇಡೀ ಸನ್ನಿವೇಶ ತುಂಬಾ ಅಸ್ತವ್ಯಸ್ತವಾಗಿ, ಸ್ವಚ್ಛತೆಯಿಲ್ಲದೆ ಕಂಡಿರಬೇಕು. ಸ್ವತಃ ನಾನೇ ಇದರ ಬಗ್ಗೆ ಅನೇಕ ಬಾರಿ ಚಿಂತಿತನಾಗಿದ್ದೇನೆ. ಬಹುಶಃ ಇನ್ನೊಂದು ತಿಂಗಳಲ್ಲಿ ಎಲ್ಲವೂ ಸರಿ ಹೋಗಬಹುದೆಂದು ಕಾಣುತ್ತದೆ. ಇವೆಲ್ಲಾ ಹೊರಗಡೆಯವರಿಗೆ ಹೇಗೆ ತಿಳಿಯುತ್ತವೆ. ಅದರಲ್ಲೂ ಅಧಿಕಾರಿಗಳಿಗೆ!, ನಿಮಗೆ ಸರಿಯಾದ ಸಲಹೆ ನೀಡುವ ಬದಲು ನಿಮ್ಮ ಕೆಲಸದಲ್ಲಿ ಎಪ್ಪತ್ತಾರು ತಪ್ಪುಗಳನ್ನು ಹುಡುಕುತ್ತಾರೆ.

ಬಿ.ಎಸ್.ಎ ಸಾಹೇಬರ ಈ ಟೀಕೆ, ಟಿಪ್ಪಣಿಗಳಿಂದ ನಾನು ಕೆಲಕಾಲ ಆವೇಶಭರಿತನಾಗಿದ್ದೆ. ಆದರೆ ಬಹಳ ಬೇಗ ನನ್ನನ್ನು ನಾನು ನಿಯಂತ್ರಣ ಮಾಡಿಕೊಂಡೆ. ಎಲ್ಲಾ ವ್ಯಕ್ತಿಗಳಿಗೂ ತಮ್ಮದೇ ಆದ ದೌರ್ಬಲ್ಯಗಳಿರುತ್ತವೆ, ಅದು ಸಹಜ. ಆದರೆ ಮೇಲಧಿಕಾರಿಗಳು ತಮ್ಮ ಬಲಹೀನತೆಗಳ ಕುರಿತು ತಿಳಿದುಕೊಳ್ಳುವುದು ಅಥವಾ ತಮ್ಮ ಕೆಳಗಿನವರು ತಮ್ಮಿಂದ ಏನನ್ನು ಅಪೇಕ್ಷಿಸುತ್ತಾರೆ ಎಂದು ಆಲೋಚಿಸುವುದು ತುಂಬಾ ಅಪರೂಪ. ನನ್ನ ಬಲಹೀನತೆಗಳ ಬಗ್ಗೆ ನನಗೆ ಸಂಪೂರ್ಣವಾಗಿ ಅರಿವಿದೆ ಮತ್ತು ಆದಷ್ಟು ಬೇಗ ಅವುಗಳಿಂದ ಹೊರಬರಲು ಪ್ರಯತ್ನಿಸುತ್ತಿದ್ದೇನೆ. ಕೊನೆಗೆ ನಾನು ಭಗವಂತನಿಗೆ ಉತ್ತರ ಕೊಡಬೇಕೆಂದು ನನಗೆ ಗೊತ್ತಿದೆ. ನಾನು ಯಾವುದಾದರೂ ಕಾರಣಕ್ಕೆ ಆವೇಶಭರಿತನಾದರೆ, ಉದ್ವೇಗಕ್ಕೊಳಗಾದರೆ ವಾಸ್ತವ ಪರಿಸ್ಥಿತಿಯನ್ನು ಆ ಭಗವಂತನಿಗೆ ತಿಳಿಸುತ್ತೇನೆ. ನಾನು ನನ್ನ ಶಾಲೆಯಲ್ಲಿನ ಕುಂದು ಕೊರತೆಗಳನ್ನು ಚೆನ್ನಾಗಿ ಬಲ್ಲೆ. ಆದಷ್ಟು ಬೇಗ ಅವುಗಳನ್ನು ಸುಧಾರಿಸುವ ಅಭಿಲಾಷೆ ಹೊಂದಿದ್ದೇನೆ. ಶೀಘ್ರದಲ್ಲೇ ಆ ಸಮಸ್ಯೆಗಳಿಗೆಲ್ಲಾ ಪರಿಹಾರ ಕಂಡುಕೊಂಡು ಇವರ ಮುಂದೆ ತಲೆ ಎತ್ತಿ ನಿಲ್ಲುತ್ತೇನೆಂಬ ಭರವಸೆ ನನಗಿದೆ. ನಮ್ಮ ಶಾಲೆಗೆ ಶಿಕ್ಷಣ ಇಲಾಖೆಯ ನಿರ್ದೇಶಕರನ್ನು ಆಹ್ವಾನಿಸುವ ಸಾಹಸ ಮಾಡುವಷ್ಟು ಆತ್ಮ ವಿಶ್ವಾಸ ಗಳಿಸಿಕೊಳ್ಳುತ್ತೇನೆ.

ಮತ್ತೆ ಬಿ.ಎಸ್.ಎ ಸಾಹೇಬರು ನಿನಗೆ ಪಠ್ಯಪುಸ್ತಕ ಪರಿಶೀಲನೆಗೆ ಆದೇಶ ತಲುಪಿದೆಯೆ? ಎಂದರು. ನನಗೆ ಅವರ ಕಛೇರಿಯಿಂದ ಯಾವುದೇ ಆದೇಶ ತಲುಪಿರಲಿಲ್ಲ. ಬದಲಿಗೆ ಅದು ಪಠ್ಯಪುಸ್ತಕ ನಿರ್ದೇಶನಾಲಯದಿಂದ ಬಂದಿತ್ತು. ನಾನು ಸುಮ್ಮನೆ ಹೌದು ಎಂದೆ. ಪಠ್ಯಪುಸ್ತಕ ಪರಿಶೀಲನೆಗೆ ಹೋಗುವ ಮುನ್ನ ಅವರನ್ನೊಮ್ಮೆ ಭೇಟಿ ಮಾಡುವಂತೆ ಹೇಳಿದರು. ನಿರ್ದೇಶನಾಲಯದವರು ಪಠ್ಯಪುಸ್ತಕ ಪರಿಶೀಲನಾ ತಂಡದ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳುವಂತೆ ಸೂಚಿಸಿದ್ದಾರೆ ಎಂದು ನನ್ನ ಇಂಗಿತವನ್ನು ತಿಳಿಸಿದೆ. ಆದರೆ ಅವರು ಅದನ್ನು ಸಮ್ಮತಿಸದೇ ಹೊರಟು ಹೋದರು. ಇಷ್ಟೆಲ್ಲಾ ಸಂಭಾಷಣೆ ನಡೆದದ್ದು ರಸ್ತೆ ಬದಿಯಲ್ಲೇ! ಅವರು ಬಸ್‌ನಲ್ಲಿ ಕುಳಿತಿದ್ದರು. ನಾನು ಕಿಟಕಿಯ ಪಕ್ಕ ನಿಂತುಕೊಡಿದ್ದೆ.

ಅನಂತರ ನಾನು ಶಾಲೆಗೆ ಹೋಗಿ ಆ ಇಬ್ಬರು ಯುವಕರಿಗೆ ಅವರ ಪತ್ನಿಯರ ಅಂಕಪಟ್ಟಿಯನ್ನು ನೀಡಿ ಮನೆಗೆ ಹಿಂತಿರುಗಿದೆ.

## 21–ಆಗಸ್ಟ್–2007

ಇಂದು ಮಂಗಳವಾರ, ಸಿ.ಆರ್.ಸಿ. ರಾಯಮೇರ್‌ನಲ್ಲಿನ ತರಬೇತಿ ಮುಕ್ತಾಯವಾಯಿತು.

ಓಸ್ವಾಲ್ ಮತ್ತು ಹರೀಶ್ ಥಡಲಿಯಾಲ್ ಇಬ್ಬರೂ ಜಗಳವಾಡಿದರು. ನಾನು ನೀಲ ನಕಾಶೆ ಬಗ್ಗೆ ತಿಳಿಸಿದೆ. ಪ್ರಯಾಣ ಭತ್ಯೆಯ ಬಿಲ್‌ಗಳನ್ನು ಭರ್ತಿ ಮಾಡಿಸಿಕೊಂಡು ಭತ್ಯೆಯನ್ನು ವಿತರಿಸಿದೆ. ಬೆಳಿಗ್ಗೆ 6 ಜನ ಮಾತ್ರ ಉಪಸ್ಥಿತರಿದ್ದರು. ಊಟ ಮತ್ತು ಟಿ.ಎ ಹಂಚುವ ವೇಳೆಗೆ ಆ ಸಂಖ್ಯೆ 11 ಆಯಿತು. ಸಕಲಾನಿಯವರು ಎಲ್ಲರಿಗೂ ಸಿಹಿ ಹಂಚಿದರು. ನಾನು ಪಠ್ಯ ಪುಸ್ತಕ ಪರಿಶೀಲನೆಗೆ ಸಂಬಂಧಿಸಿದಂತೆ ಹಲವರಿಗೆ ಕರೆ ಮಾಡಿ ವಿಚಾರಿಸಿದೆ.



## 22–ಆಗಸ್ಟ್–2007

ಇಂದು 9 ದಿನಗಳ ತರಬೇತಿಯಲ್ಲಿ ಮುಖ್ಯ ತರಬೇತುದಾರನಾಗಿ ಪಾಲ್ಗೊಂಡ ನಂತರ ನನ್ನ ಶಾಲೆಗೆ ಹೋದೆ. ಸರಿಯಾಗಿ 7–30ಕ್ಕೆ ಶಾಲೆ ತಲುಪಿದೆ. ಪ್ರತಿದಿನದಂತೆ ಇಬ್ಬರು ಸ್ವಯಂ ಸೇವಕ ಶಿಕ್ಷಕಿಯರು – ಬಿಂದು ಮತ್ತು ಕೇದಾರಿ ಉಪಸ್ಥಿತರಿದ್ದರು. ಕೇದಾರಿ 9 ಗಂಟೆಗೆ ಹೊರಟು ಹೋದಳು. ಅವಳು ಅಂಗನವಾಡಿ ಕಾರ್ಯಕರ್ತೆಯ ಹುದ್ದೆಗೆ ಅರ್ಜಿ ಸಲ್ಲಿಸುತ್ತಿದ್ದಳು ಆದ್ದರಿಂದ ಬ್ಲಾಕ್ ಮುಖ್ಯ ಕಾರ್ಯಾಲಯ, ಡುಂಡಕ್ಕೆ ಹೋದಳು. ಇಂದು ನನ್ನ ಆರೋಗ್ಯ ಸರಿಯಿರಲಿಲ್ಲ ಹಾಗಾಗಿ ಯಾವುದೇ ತರಗತಿ ತೆಗೆದುಕೊಳ್ಳಲಿಲ್ಲ. ಕೇದಾರಿ ಹೋಗುವ ಮುನ್ನ 4 & 5 ನೇ ತರಗತಿಗಳಿಗೆ ಓದುವ ಕೌಶಲ ಬೆಳೆಸಲು ತಯಾರಿಸಿದ್ದ ಟಿ.ಎಲ್.ಎಮ್ ಅನ್ನು ಅಭ್ಯಾಸ ಮಾಡಿಸಿದಳು. ಅದರಲ್ಲಿ ಹೂಗಳ ಹೆಸರು, ಹಣ್ಣುಗಳ ಹೆಸರು, ಪ್ರಾಣಿಗಳ ಹೆಸರು ಮತ್ತು ಆಹಾರ ಪದಾರ್ಥಗಳ ಹೆಸರುಗಳನ್ನು ಹುಡುಕಿ ತಮ್ಮ ನೋಟ್ ಪುಸ್ತಕದಲ್ಲಿ ಬರೆಯುವ ಚಟುವಟಿಕೆಯಿತ್ತು. ಅದರಲ್ಲಿ ಅರ್ಧ ಮಾತ್ರ ಅಭ್ಯಾಸ ಮಾಡಿಸಲು ಸಾಧ್ಯವಾಯಿತು. ಅಷ್ಟರಲ್ಲಿ ಸಂಸ್ಕೃತದ ಅವಧಿ ಪ್ರಾರಂಭವಾಯಿತು. ವಿಮಲಾ ಸಂಸ್ಕೃತ ಓದಿಸುವ ಅಭ್ಯಾಸ ಮಾಡಿಸಿದಳು.

ಇಂದು ಶಾಲೆಗೆ ಶಿವದತ್ತರವರು ಬಂದಿದ್ದರು. ಅವರು ಶಾಲೆಯಲ್ಲಿ ಚೈಲ್ಡ್ ಫ್ರೆಂಡ್ಲಿ ಕಾಮಗಾರಿ ಕೆಲಸ ಮಾಡುತ್ತಿದ್ದಾರೆ. ಅವರಿಗೆ ಮುಂಗಡ ಹಣ 2000 ರೂ. ಕೊಟ್ಟಿದ್ದೆ. ಈ ತಿಂಗಳ 26 ರೊಳಗೆ ಇನ್ನೂ 1000 ರೂ. ಕೊಡಬೇಕಾಗಿತ್ತು.

ಇಂದು ಉತ್ತಮ ಬೋಧನಾ ಕಾರ್ಯ ನಡೆಯಲಿಲ್ಲ. ನಾನು ಒಂದೂ ತರಗತಿ ತೆಗೆದುಕೊಳ್ಳಲಿಲ್ಲ. ಶಾಲಾ ಅವಧಿ ಮುಗಿದ ನಂತರ ಸುರೇಂದ್ರ, ರಮೇಶ ಮತ್ತು ಉತ್ತಮ್‌ರವರಿಗೆ ಕಲ್ಲುಗಳನ್ನು ಪುಡಿ ಮಾಡಿದ್ದಕ್ಕಾಗಿ ಹಣ ಪಾವತಿಸಿದೆ. ಈ ಮೂವರು ಹುಡುಗರು 18 ಚೀಲ ಕಲ್ಲುಗಳನ್ನು ಪುಡಿ ಮಾಡಿದ್ದರು. ಅವರಿಗೆ 400 ರೂ. ನೀಡಿದೆ. ಕಲ್ಲು ಹೊಡೆಯಲು ಸ್ಥಳೀಯವಾಗಿ ಯಾರೂ ಕೆಲಸಗಾರರು ಸಿಗದ ಕಾರಣ ಈ ಹುಡುಗರಿಂದ ಮಾಡಿಸಬೇಕಾಯಿತು. ಅವರು ಈ ಕೆಲಸವನ್ನು ಸ್ವ ಇಚ್ಛೆಯಿಂದ ಮಾಡಿದರು ಮತ್ತು ಶಾಲಾ ಅವಧಿಯ ನಂತರ ಮಾಡಿದರು.

ಇಂದು ಕಟ್ಟಿಗೆ ತರುವವಳಿಗೂ ಹಣ ಪಾವತಿಸಿದೆ. ಎರಡು ಹೊರೆ ಸೌದೆಗೆ 170 ರೂ. ನೀಡಿದೆ. ಇಂದು ಕೇದಾರಿ ಸ್ವತಃ ಹೆಣೆದಿದ್ದ ಒಂದು ಸ್ತ್ರೀಯರ ಸ್ವೆಟರ್ ತಂದಿದ್ದಳು. ಅದು ಅಷ್ಟೇನೂ ಚೆನ್ನಾಗಿರಲಿಲ್ಲ. ಇದು ಕೆಲಸ ಮಾಡುವ ಬಡ ಮಹಿಳೆಯರಿಗೆ ಉಪಯೋಗವಾಗುತ್ತೆ ಆದ್ದರಿಂದ ಬೇರೆ ಯಾರಿಗಾದರೂ ಮಾರುವಂತೆ ಹೇಳಿದೆ.

ಇಂದು ತುಪ್ಪ ತಂದಿದ್ದ ಇಬ್ಬರು ಮಕ್ಕಳಿಗೂ ಹಣ ಪಾವತಿಸಿದೆ. 14 ರಂದು ಈ ಮಕ್ಕಳಿಂದ 3 ಕಿ.ಗ್ರಾಂ. ತುಪ್ಪ ತರಿಸಿದ್ದೆ. ಇಂದು ಎನ್.ಪಿ.ಆರ್.ಸಿ. ಸಮನ್ವಯಾಧಿಕಾರಿಗಳಾದ ಶ್ರೀ ಬಿಷ್ಟ್ ರವರು 27ನೇ ತಾರೀಖಿನಂದು ಅಡುಗೆ ಸಾಮಗ್ರಿಗಳ ಆಡಿಟ್ ಇರುವುದಾಗಿ ತಿಳಿಸಿದ್ದರು. ನಾಳೆ ಅದರ ಸಿದ್ಧತೆ ಮಾಡಿಕೊಳ್ಳಲು ಮಾನಸಿಕವಾಗಿ ಸಿದ್ಧನಾದೆ.

## 23–ಆಗಸ್ಟ್–2007

ಇಂದು 7–45ಕ್ಕೆ ಶಾಲೆ ತಲುಪಿದೆ. ಆಗಲೇ ಬಹುಪಾಲು ಮಕ್ಕಳು ಶಾಲೆಗೆ ಬಂದಿದ್ದರು. ಆದರೆ ಇಬ್ಬರು ಸ್ವಯಂ ಸೇವಕಿಯರಾಗಲೀ, ಲೋದು ವಿದ್ಯಾಕೇಂದ್ರದ ಶಿಕ್ಷಕಿ ಶ್ರೀಮತಿ ವಿಮಲಾ ಆಗಲೀ ಮತ್ತು ಅಡುಗೆ ಮಾಡುವವರಾಗಲೀ ಬಂದಿರಲಿಲ್ಲ. ನಾನು ಬಂದ 5–10 ನಿಮಿಷಗಳಲ್ಲಿ ಅವರೆಲ್ಲಾ ಬಂದರು. ಪ್ರಾರ್ಥನೆ ಅವಧಿ ಆರಂಭವಾಯಿತು. ಯಾವುದೇ ಮಗು ಪ್ರಾರ್ಥನೆ ಹಾಡಲು ಸ್ವ ಇಚ್ಛೆಯಿಂದ ಮುಂದೆ ಬರಲು ಇಚ್ಛಿಸುತ್ತಿಲ್ಲ. ಪ್ರತಿದಿನ ಅವರನ್ನು ಪದೇ ಪದೇ ಕರೆಯಬೇಕು. ಕೆಲವೊಮ್ಮೆ ಬೈದು ಕರೆಯಬೇಕು. ಅದೇ ರೀತಿ ರಾಷ್ಟ್ರಗೀತೆಯನ್ನು ತುಂಬಾ ತಪ್ಪು ತಪ್ಪಾಗಿ ಹಾಡುತ್ತಾರೆ. ಪ್ರತಿಜ್ಞಾ ವಿಧಿಯಲ್ಲಿ ಸಾಕಷ್ಟು ಉಚ್ಚಾರಣಾ ದೋಷಗಳನ್ನು ಮಾಡುತ್ತಾರೆ. ಇದನ್ನು ಸ್ವಲ್ಪ ಗಂಭೀರವಾಗಿ ಪರಿಗಣಿಸಬೇಕಾದ ಅಗತ್ಯವಿದೆ. ನನಗನಿಸುತ್ತಿದೆ ಮಕ್ಕಳು ಪ್ರಾರ್ಥನೆಯ ಅವಧಿಯನ್ನು ಒಂದು ಹೊರೆಯೆಂದು ಭಾವಿಸುತ್ತಿದ್ದಾರೆ. ನಾನು ಈ ಅವಧಿಯನ್ನು ಆಸಕ್ತಿಕರವಾಗಿಸಲು ಶ್ರಮವಹಿಸಬೇಕಾದ ಅಗತ್ಯವಿದೆ. ಹಾಗೆ ನಾನು ಮಾಡುತ್ತೇನೆ.

ಇಂದೂ ಸಹ ನನ್ನ ಆರೋಗ್ಯ ಪೂರ್ತಿಯಾಗಿ ಸರಿಯಿರಲಿಲ್ಲ. ಮೈಕೈ ನೋವು ತುಂಬಾ ಇತ್ತು. ತುಂಬಾ ಆಯಾಸವಾಗುತ್ತಿತ್ತು. ಆದರೂ ಎಲ್ಲಾ ತರಗತಿಗಳಿಗೆ ಹೋಗಿ ಹಾಜರಾತಿ ತೆಗೆದುಕೊಂಡೆ. ನನ್ನ ಸಹೋದ್ಯೋಗಿಯರಿಗೆ ಕೆಲವು ಬೋಧನಾ ವಿಧಾನಗಳ ಬಗ್ಗೆ ತಿಳಿಸಿಕೊಟ್ಟೆ. 4–5ನೇ ತರಗತಿಗಳ ಎರಡೂ ಗುಂಪುಗಳಿಗೆ ಓದುವ ಕೌಶಲ ಬೆಳೆಸಲು ರೂಪಿಸಿದ್ದ ಟಿ.ಎಲ್.ಎಮ್. ನಲ್ಲಿನ ಆಭ್ಯಾಸ ಮುಂದುವರೆಸಿದೆ. ಅದರಲ್ಲಿ ಆಹಾರ ಪದಾರ್ಥಗಳು, ತರಕಾರಿಗಳು, ಹಣ್ಣುಗಳು ಮತ್ತು ಪ್ರಾಣಿಗಳ ಹೆಸರುಗಳನ್ನು ಗುರ್ತಿಸಿ ತಮ್ಮ ನೋಟ್ ಪುಸ್ತಕಗಳಲ್ಲಿ ಬರೆಯಬೇಕಾಗಿತ್ತು.

ಪ್ರತಿ ಮಗುವಿನ ಕಲಿಯುವ ಮತ್ತು ಅರ್ಥ ಮಾಡಿಕೊಳ್ಳುವ ವೇಗ ಬೇರೆ ಬೇರೆಯಾಗಿರುತ್ತದೆ. ಇದೇ ಅಂಶ ಅಧ್ಯಾಪಕನ ಧೈರ್ಯವನ್ನು ವಿಚಲಿತಗೊಳಿಸುತ್ತದೆ. ತಾಳ್ಮೆ ಕಳೆದುಕೊಳ್ಳುವಂತೆ ಮಾಡುತ್ತದೆ. ನಾವು ಪ್ರತಿ ಮಗುವೂ ಎಲ್ಲಾ ವಿಷಯಗಳನ್ನು ಒಂದೇ ವೇಗದಲ್ಲಿ ಕಲಿಯಬೇಕೆಂದು ಅಪೇಕ್ಷಿಸುತ್ತೇವೆ. ಆದರೆ ಅದು ಹಾಗಾಗುವುದಿಲ್ಲ. ನಾವು ಒಂದು ವೇಳೆ ಈ ವಾಸ್ತವವನ್ನು ಮುಕ್ತ ಮನಸ್ಸಿನಿಂದ ಸ್ವೀಕರಿಸಿದ್ದಾದರೆ ಮಕ್ಕಳಿಗೆ ಸಾಕಷ್ಟು ಸಹಾಯವಾಗುತ್ತದೆ.

ಓದುವುದನ್ನು ರೂಢಿಸಲು ರೂಪಿಸಿದ ಮೂರು ಪತ್ರಿಕೆಗಳಲ್ಲಿ ಮಕ್ಕಳಿಗೆ ಪರಿಚಯವಿರುವ ಮತ್ತು ಸಾಕಷ್ಟು ಬಾರಿ ಕೇಳಿರುವ ಪದಗಳನ್ನು ಸೇರಿಸಿದ್ದೆ. ಜತೆಗೆ ಮಕ್ಕಳು ಸುಲಭವಾಗಿ ಓದಿ ಅರ್ಥ ಮಾಡಿಕೊಳ್ಳಬಲ್ಲ ಸರಳ ಕಥೆಗಳನ್ನು ಸೇರಿಸಿದ್ದೆ. ಇವು ನನಗೆ ತುಂಬಾ ಸಹಾಯ ಮಾಡಿದವು. ಇವೂ ನನಗಷ್ಟೇ ಅಲ್ಲದೆ ಮಕ್ಕಳಿಗೂ ತುಂಬಾ ಸಹಾಯವಾದವು. ಈ ಮುಂಚೆ 4–5ನೇ ತರಗತಿಗಳ ಒಟ್ಟು 20 ಮಕ್ಕಳಲ್ಲಿ ಕೇವಲ ಮೂವರು ಸರಿಯಾಗಿ ಓದುತ್ತಿದ್ದರು. ಆದರೆ ಈಗ 10 ಮಕ್ಕಳು ಸರಾಗವಾಗಿ ತಪ್ಪಿಲ್ಲದೆ ಓದುತ್ತವೆ. ಈ 10 ಮಕ್ಕಳು ತಾವು ಓದಿದ ಪದಗಳನ್ನು ಅರ್ಥ ಮಾಡಿಕೊಳ್ಳುವುದಲ್ಲದೆ ಅವುಗಳನ್ನು ವಿಶ್ಲೇಷಿಸಿ ವರ್ಗೀಕರಿಸುತ್ತವೆ. ಈಗ ಇವರಿಗೆ ಕಥೆಯ ಪತ್ರಿಕೆಯನ್ನು ಪ್ರಾರಂಭಿಸಬೇಕಿದೆ.

ಎರಡನೆಯ ಗುಂಪಿನ ಮಕ್ಕಳು ಕೆಲವು ಪದಗಳನ್ನು ಸರಾಗವಾಗಿ ಓದುತ್ತಾರೆ ಆದರೆ ಇನ್ನು ಕೆಲವು ಪದಗಳನ್ನು ಓದಲು ಕಷ್ಟಪಡುತ್ತಿದ್ದಾರೆ. ಆದರೆ ಅವರು ಏನನ್ನು ಓದುತ್ತಿದ್ದಾರೋ ಅದನ್ನು ಅರ್ಥ ಮಾಡಿಕೊಂಡು ಓದುತ್ತಿದ್ದಾರೆ. ಈ ಚಟುವಟಿಕೆಯನ್ನು 2ನೇ ತರಗತಿಯಲ್ಲಿ ಮಾಡಿಸಬೇಕಾಗಿತ್ತು ಆದರೆ ಈ ಮಕ್ಕಳ ಕಲಿಕಾ ಮಟ್ಟ ಅವರಿಗಿಂತ ಕೆಳಗಡೆ ಇದೆ. ಆದ್ದರಿಂದಲೇ ಮೊದಲು ಇವರಿಗೆ ಈ ಪ್ರಯೋಗವನ್ನು ಮಾಡಬೇಕಾಯಿತು ಮತ್ತು ನಾನು ಅಪೇಕ್ಷಿಸಿದ್ದಕ್ಕಿಂತ ಉತ್ತಮ ಫಲಿತಾಂಶ ದೊರೆಯುತ್ತಿದೆ.

ಓದುವುದನ್ನು ವರ್ಣಮಾಲೆಯ ಬದಲು ಪದಗಳಿಂದ ಪ್ರಾರಂಭಿಸಿ ನಂತರ ಅಕ್ಷರಗಳನ್ನು ಗುರ್ತಿಸುವುದನ್ನು ಅಭ್ಯಾಸ ಮಾಡಿಸಬೇಕೆಂಬ ಹೊಸ ಪಠ್ಯಪುಸ್ತಕಗಳಲ್ಲಿನ ಪರಿಕಲ್ಪನೆಗೆ ಈ ಪ್ರಯೋಗಗಳಿಂದ ಪುಷ್ಟಿ ದೊರೆಯಿತು.

ಈ ಚಟುವಟಿಕೆಗಳಿಂದಾಗಿ ಮಕ್ಕಳು ಅರ್ಥ ಮಾಡಿಕೊಂಡು ಬರೆಯುತ್ತಿದ್ದಾರೆ. ಇದನ್ನು ನಾವು ಪರೀಕ್ಷಿಸಬಹುದಾಗಿದೆ. ಇದಕ್ಕಾಗಿ 168 ಪದಗಳನ್ನು ಪಟ್ಟಿ ಮಾಡಿದ್ದೇನೆ. ಆ ಪದಗಳು ಮಕ್ಕಳು ಪ್ರತಿದಿನ ಕೇಳುವ ಮತ್ತು ಬಳಸುವ ಪದಗಳೇ ಆಗಿವೆ. ಅವು ಮಕ್ಕಳಿಗೆ ತೀರಾ ಅಪರಿಚಿತ ಪದಗಳಲ್ಲ. ಮೊದಲು ಈ ಪದಗಳ ಅನುಕರಣ ವಾಚನ ಮಾಡಿಸಿದೆ. ನಂತರ ಪದದಲ್ಲಿನ ಪ್ರತಿ ಅಕ್ಷರದ ಮೇಲೂ ಬೆರಳಿಟ್ಟು ಜೋರಾಗಿ ಓದುವ ಅಭ್ಯಾಸ ಮಾಡಿಸಿದೆ. ಅನಂತರ ಪದಗಳ ಕುರಿತು ಚರ್ಚೆ ಮಾಡಿಸಿದೆ. ಉದಾಹರಣೆಗೆ – ಜಿಲೇಬಿ ಎಂದರೇನು? ಮಕ್ಕಳು ಒಂದು ತಿನ್ನುವ ಪದಾರ್ಥ, ಸಿಹಿ ತಿಂಡಿ ಎಂದು ಉತ್ತರಿಸುತ್ತಾರೆ. ಅವರು ಸಾಮಾನ್ಯವಾಗಿ ತಮ್ಮ ಮಾತೃಭಾಷೆಯಲ್ಲಿ ಉತ್ತರಿಸುತ್ತಾರೆ. ಮಿಠಾಯಿ ಎನ್ನುವ ಬದಲು ಮಿಠೈ ಎನ್ನುತ್ತಾರೆ. ಕುರ್ತಾ ಎಂದರೇನು? ಎಂದರೆ ಹಾಕಿಕೊಳ್ಳುವ ವಸ್ತು ಎನ್ನುತ್ತಾರೆ. ಅಂದರೆ ತೊಡುವ ವಸ್ತು ಎಂದರ್ಥ. ಅಂದರೆ ಮಕ್ಕಳು ಪದಗಳನ್ನು ಅರ್ಥ ಮಾಡಿಕೊಳ್ಳುತ್ತಿದ್ದಾರೆ. ಆದರೆ ಅದನ್ನು ಅಭಿವ್ಯಕ್ತಿಗೊಳಿಸಲು ಮಾತೃಭಾಷೆಯ ಪದಗಳನ್ನು ಬಳಸುತ್ತಿದ್ದಾರೆ. ನಮ್ಮ ಪಾರಂಪರಿಕ ಶಿಕ್ಷಣ ಪದ್ಧತಿಯು ಮಕ್ಕಳ ಈ ರೀತಿಯ ಭಾಷಾ ಪ್ರಯೋಗವನ್ನು ನಿರುತ್ತೇಜಿಸುವುದಲ್ಲದೆ ಅದನ್ನು ಹಾಸ್ಯಾಸ್ಪದಗೊಳಿಸುತ್ತಿದೆ. ನಮ್ಮ ಸಾಮಾನ್ಯ ಸಾಂಪ್ರದಾಯಿಕ ಶಿಕ್ಷಕರು ಮಕ್ಕಳು ಪುಸ್ತಕದಲ್ಲಿರುವಂತೆ ಗ್ರಾಂಥಿಕ ಭಾಷೆಯನ್ನೇ ಬಳಸಬೇಕೆಂದು ಅಪೇಕ್ಷಿಸುತ್ತಾರೆ. ಆದರೆ ಈ ರೀತಿ ಒತ್ತಡ ಹೇರುವುದು ಮಕ್ಕಳ ಭಾಷಾ–ಅಭಿವ್ಯಕ್ತಿ ಕೌಶಲಗಳು ವಿಕಸನವಾಗುವುದನ್ನು ನಿರ್ಬಂಧಿಸುತ್ತದೆ.



ನಾವು ಈ ಪಟ್ಟಿಯಿಂದ ಒಂದು ಪದಗಳ ಆಟ ಆಡಿದೆವು. ಇಂದು ಕೆಲವು ಮಕ್ಕಳು ಗುಲಾಬ್ ಜಾಮೂನ್‌ನ್ನು ಹೂಗಳ ಗುಂಪಿಗೆ ಸೇರಿಸಿದ್ದರು. ಅದೇ ರೀತಿ ಚಮೇಲಿ(ಊಸರವಳ್ಳಿ)ಯನ್ನು ಒಂದು ಸ್ಥಳ ಎಂದು ಕೊಂಡಿದ್ದರು. ಕೆಲವರು ಚಿಟ್ಟೆಯನ್ನು ಹಕ್ಕಿಗಳ ಗುಂಪಿಗೆ ಸೇರಿಸಿದ್ದರು. ಇಂಥಹ ಪ್ರಸಂಗಗಳು ಎದುರಾದಾದಾಗ ಅವು ಚರ್ಚೆಗೆ ಉತ್ತಮ ಅವಕಾಶವನ್ನು ಒದಗಿಸುತ್ತವೆ. ತುಂಬಾ ಮಕ್ಕಳು 'ರಬ್ರಿ' ಯನ್ನು ರಬ್ಬರ್ ಎಂದು ಅರ್ಥ ಮಾಡಿಕೊಂಡಿದ್ದರು. ಕೆಲವರು ಅದು ಕೂದಲಿಗೆ ಹಾಕಿಕೊಳ್ಳುವ ವಸ್ತು ಎಂದರು. ಇನ್ನು ಕೆಲವರು ಪೆನ್ಸಿಲ್ ಅಳಿಸುವ ರಬ್ಬರ್ ಎಂದರು. ಎಲ್ಲರೂ ಕ್ರೀಮ್ ಅನ್ನು ಕ್ರೀಮ್‌ರೋಲ್ ಎಂದು ಭಾವಿಸಿ ತಿನ್ನುವ ಪದಾರ್ಥಗಳ ಗುಂಪಿಗೆ ಸೇರಿಸಿದ್ದರು. 'ಮಕ್ಕರಿ'ಯನ್ನು ಸ್ಥಳೀಯ ಭಾಷೆಯಲ್ಲಿ 'ಮಕ್ರ' ಎನ್ನುತ್ತಾರೆ. ಹಲವಾರು ಮಕ್ಕಳು 'ಮಕ್ರಿ' ಮತ್ತು 'ಮಕ್ರ' ಎರಡೂ ಒಂದೇ ವಸ್ತು ಎಂದು ತಿಳಿದುಕೊಳ್ಳಲು ವಿಫಲರಾದರು. ಅವರು ಪ್ರಾಣಿಗಳು ಮತ್ತು ಪಕ್ಷಿಗಳ ನಡುವೆ ವ್ಯತ್ಯಾಸ ಗುರ್ತಿಸುತ್ತಾರೆ. ಆದರೆ ಪ್ರಾಣಿಗಳು ಮತ್ತು ಕೀಟಗಳ ನಡುವಿನ ವ್ಯತ್ಯಾಸವನ್ನು ತಿಳಿದುಕೊಳ್ಳುತ್ತಿಲ್ಲ. ಆದ್ದರಿಂದಲೇ ಚಿಟ್ಟೆ ಮತ್ತು ಪತಂಗಗಳನ್ನು ಪಕ್ಷಿಗಳ ಗುಂಪಿಗೂ, ಹಲ್ಲಿ, ಜಿರಲೆ ಹಾಗೂ ಹಾವುಗಳನ್ನು ಪ್ರಾಣಿಗಳ ಗುಂಪಿಗೂ ಸೇರಿಸಿದ್ದಾರೆ. ಹಾಗಾಗಿ ಈ ಚಟುವಟಿಕೆ ನಮಗೆ ಭಾಷೆ, ಪರಿಸರ ಮತ್ತು ವಿಜ್ಞಾನ ಇತ್ಯಾದಿಗಳ ಕುರಿತು ಒಟ್ಟಿಗೆ ಚರ್ಚಿಸಲು ಅವಕಾಶ ಮಾಡಿಕೊಟ್ಟಿತ್ತು. ನನಗೆ ಈಗ ಅರಿವಾಯಿತು. ನಾನು ಓದುವುದನ್ನು ರೂಢಿಸಲು ಟಿ.ಎಲ್.ಎಮ್ ತಯಾರಿಸುತ್ತಿದ್ದರೆ ನನ್ನ ಉದ್ದೇಶ ಕೇವಲ ಓದುವ ಕೌಶಲ ಬೆಳೆಸುವುದು ಮಾತ್ರ ಇರುತ್ತಿತ್ತು.

ಮೂರನೆಯ ತರಗತಿಯ ಮೊದಲನೇ ಗುಂಪಿನಲ್ಲಿ 8ರ ಪೈಕಿ 5 ಮಕ್ಕಳು ಮಾತ್ರ ಹಾಜರಿದ್ದರು. ಈ ಗುಂಪಿಗೆ ದಶಕ ಸಹಿತ ಸಂಕಲನ ಮಾಡಿಸಿದೆ. ಎರಡನೆಯ ಗುಂಪಿನಲ್ಲಿ 12ರ ಪೈಕಿ 9 ಮಕ್ಕಳು ಮಾತ್ರ ಹಾಜರಿದ್ದರು. ಇವರಿಗೆ ದಶಕರಹಿತ ಸರಳ ಸಂಕಲನದ ಲೆಕ್ಕಗಳನ್ನು ಮಾಡಿಸಿದೆ. ನಾನು ಸಂಕಲನದ ಮೂಲಕ ಮಗ್ಗಿಗಳನ್ನು ಬರೆಸುವ ಪ್ರಯೋಗ ಮಾಡುತ್ತಿದ್ದೇನೆ. ಉದಾಹರಣೆಗೆ 13ನ್ನು 2 ಸಲ ಕೂಡಿದರೆ 13 ಎರಡಲಿ ಎಷ್ಟು ಎಂದು ತಿಳಿಯುತ್ತದೆ. ಅದೇ ರೀತಿ 13ನ್ನು 8 ಸಲ ಕೂಡಿದರೆ 13 ಎಂಟಲಿ ಎಷ್ಟಾಗುತ್ತದೆ ಎಂದು ತಿಳಿದುಕೊಳ್ಳುತ್ತಾರೆ. ಮಕ್ಕಳು ಇದರಲ್ಲಿ ಆಸಕ್ತಿಯಿಂದ ತೊಡಗಿಸಿಕೊಳ್ಳುತ್ತಾರೆ. ಕೆಲವೊಮ್ಮೆ ಮಕ್ಕಳು ಸ್ವತಃ ಮಗ್ಗಿ ಬರೆದು ಪುಸ್ತಕದಲ್ಲಿನ ಮಗ್ಗಿಗಳ ಜತೆ ಹೋಲಿಕೆ ಮಾಡಿ ನೋಡುತ್ತಾರೆ. ಇದು ಮಕ್ಕಳಿಗೆ ಖುಷಿಯನ್ನೂ ಕೊಡುತ್ತದೆ. ಜತೆಗೆ ಪದೇ ಪದೇ ಕೂಡುವುದರಿಂದ ಸಂಕಲನದ ಅಭ್ಯಾಸವೂ ಆಗುತ್ತದೆ. ಇಂದು ಜಮುನ ಎರಡನೇ ಗುಂಪಿನಿಂದ ಒಂದನೇ ಗುಂಪಿಗೆ ಬಡ್ತಿ ಪಡೆದಳು. ದಶಕ ಸಹಿತ ಸಂಕಲನವನ್ನು ಮಾಡಲು ಪ್ರಾರಂಭಿಸಿದಳು.

1 ಮತ್ತು 2ನೇ ತರಗತಿ ಮಕ್ಕಳ ಜತೆ ಮೌಖಿಕವಾಗಿ ಸಂಭಾಷಣೆ ಮಾಡಿದೆ. ಆದರೆ ಯಾವುದೇ ಲಿಖಿತ ಕೆಲಸ ಮಾಡಿಸಲಿಲ್ಲ. ಬಿಂದು ಈ ಎರಡೂ ತರಗತಿಗಳನ್ನು ನೋಡಿಕೊಳ್ಳುತ್ತಾಳೆ.

**24–ಆಗಸ್ಟ್–2007**

ಇಂದು ಮುಂಜಾನೆ 4 ಗಂಟೆಗೆ ಎದ್ದೆ. ಆಶ್ರಮದ ಧ್ಯಾನ ಮಂದಿರದಲ್ಲಿ ಧ್ಯಾನ ಮಾಡಿದೆ. 5 ರಿಂದ 6 ಗಂಟೆಯವರೆಗೆ ಸ್ನಾನ ಇತ್ಯಾದಿಗಳನ್ನು ಮಾಡಿದೆ. 6 ರಿಂದ 7–30ರ ವರೆಗೆ ಪುನಃ ಧ್ಯಾನ ಮತ್ತು ಪ್ರಾರ್ಥನೆಗಳಲ್ಲಿ ಪಾಲ್ಗೊಂಡೆ. 9–30ರವರೆಗೆ ಆಶ್ರಮದಲ್ಲೇ ಉಳಿದೆ. ಸಂಸ್ಥೆಯ ವತಿಯಿಂದ ಏರ್ಪಡಿಸಿದ್ದ ಅಂತರ್ ಶಾಲಾ ಸ್ಪರ್ಧೆಗಳಲ್ಲಿ ಪಾಲ್ಗೊಳ್ಳುವ ಮಕ್ಕಳಿಗೆ ಪ್ರಶಸ್ತಿ ಪತ್ರಗಳನ್ನು ಸಿದ್ಧಗೊಳಿಸಿದೆ.

ಸರಿಯಾಗಿ 10 ಗಂಟೆಗೆ ಜಿಲ್ಲಾ ಪಂಚಾಯ್ತಿಯ ಸಭಾಂಗಣದಲ್ಲಿ ಹಾಜರಿದ್ದೆ. ಅಲ್ಲಿ 'ಜಿಲ್ಲಾ ಸಂದರ್ಭ ಸಮೂಹ ಬಾಲಿಕಾ ಶಿಕ್ಷಾ'ದ (ಜಿಲ್ಲಾ ಮಟ್ಟದ ಸಮೂಹ ಬಾಲಕಿಯರ ಶಿಕ್ಷಣದ) ಕುರಿತು ಸಭೆಯಿತ್ತು. ಒಳಗೆ 4–5 ಮಹಿಳೆಯರು ಕುಳಿತುಕೊಂಡಿದ್ದರು. ಒಬ್ಬರಿಬ್ಬರು ಹೊರಗಡೆ ಸುತ್ತಾಡುತ್ತಿದ್ದರು. 11 ಗಂಟೆಗೆ ಡಿ.ಇ.ಒ ಮತ್ತು ಬಿ.ಎಸ್.ಎ ಸಾಹೇಬರು ಬಂದರು.

ಎಲ್ಲಾ ಸಭೆಗಳಂತೆ ಇಲ್ಲೂ ಔಪಚಾರಿಕತೆ ಎದ್ದು ಕಾಣುತ್ತಿತ್ತು. ಸಿ.ಎಮ್.ಒ ಪ್ರತಿನಿಧಿಗಳು ಆರೋಗ್ಯ ಮತ್ತು ಪೋಷಣೆಯ ಬಗ್ಗೆ ಕೆಲವು ಮಾತುಗಳನ್ನು ಹೇಳಿದರು. ಬಾಲಕಿಯರು ಸಮತೋಲನ ಆಹಾರ ಸೇವಿಸಬೇಕು.

ಹಾರ್ಮೋನುಗಳಲ್ಲಿ ಬದಲಾವಣೆಯಾಗುವ ಅವಧಿಯಲ್ಲಿ ಶಿಕ್ಷಕರು ಈ ಕುರಿತು ಎಚ್ಚರವಹಿಸಬೇಕು. ಹುಡುಗಿಯರಿಗೆ ಈ ಕುರಿತು ತಿಳಿವಳಿಕೆ ನೀಡಬೇಕು. ಶಾಲೆಯಲ್ಲಿ ಪ್ರಥಮ ಚಿಕಿತ್ಸಾ ಪೆಟ್ಟಿಗೆ ಇರಬೇಕು ಹಾಗೂ ಇತ್ಯಾದಿ, ಇತ್ಯಾದಿ......

ಭುವನೇಶ್ವರಿ ಆಶ್ರಮದ ಪ್ರತಿನಿಧಿ ತಮ್ಮ ಆಶ್ರಮದ ವತಿಯಿಂದ ಹೆಣ್ಣು ಮಕ್ಕಳಿಗಾಗಿ ಹಮ್ಮಿಕೊಂಡಿರುವ ಕಾರ್ಯಕ್ರಮಗಳ ಕುರಿತು ಮತ್ತು ರೇಡಿಯೋ ಕಾರ್ಯಕ್ರಮದ ಕುರಿತು ತಿಳಿಸಿದರು. ಇದೇ ರೀತಿ ಮಹಿಳಾ ಸಮಖ್ಯದ (ಸ್ವಯಂ ಸೇವಾ ಸಂಸ್ಥೆ) ಪ್ರತಿನಿಧಿ ತಮ್ಮ ಕಾರ್ಯಗಳ ಕುರಿತು ಹೇಳಿದರು.

ಈ ಸಭೆಯಲ್ಲಿ ಮನಸ್ಸಿಗೆ ನಾಟುವ ಅಥವಾ ನಮ್ಮನ್ನು ಪ್ರೇರೇಪಿಸುವ ಯಾವುದೇ ಅಂಶ ನನಗೆ ಕಾಣಲಿಲ್ಲ. ಎಲ್ಲಾ ಸರ್ಕಾರಿ ಸಭೆಗಳಂತೆ ಇಲ್ಲೂ ಸಹ 2 ಗಂಟೆಗೆ ಮುಗಿಸುವ ಧಾವಂತ (ಆತುರ) ಎದ್ದು ಕಾಣುತ್ತಿತ್ತು. ಪ್ರತಿಯೊಬ್ಬರೂ ತಮ್ಮ ತಮ್ಮ ಸಮಸ್ಯೆಗಳ ಬಗ್ಗೆ ಮಾತನಾಡಿದರು. ಬಹುಪಾಲು ಸಮಯ 'ಕಸ್ತೂರಬಾ ಗಾಂಧಿ ಹೆಣ್ಣು ಮಕ್ಕಳ ವಿದ್ಯಾಲಯ'ದ ಸಮಸ್ಯೆಗಳಲ್ಲಿಯೇ ಕಳೆದು ಹೋಯಿತು. ಆದರೇ ಯಾವುದೇ ಪರಿಹಾರ ಕಂಡುಕೊಳ್ಳಲಿಲ್ಲ. ಹೌದು, ಸಮುದಾಯದ ಕಡೆಯಿಂದಲೇ ಕೆ.ಜಿ.ಬಿ.ವಿ.ಗೆ ಬೇಕಾದ ವ್ಯವಸ್ಥೆಗಳನ್ನು ಒದಗಿಸಿಕೊಡುವ ವಿಚಾರ ಪ್ರೇರೇಪಿಸುವಂತಿತ್ತು. ಆದರೆ ಇಂಥಹ ಉದಾಹರಣೆಗಳಿಂದ ನಾವು ಕಲಿಯುವುದೂ ಇಲ್ಲ. ನಮಗೆ ಪ್ರೇರಣೆಯೂ ಆಗುವುದಿಲ್ಲ; ಇಂಥ ಪ್ರಯೋಗಗಳನ್ನು ಎಲ್ಲೂ, ಯಾರೂ ಕೈಗೆತ್ತಿಕೊಳ್ಳುವುದೂ ಇಲ್ಲ.

ನಮ್ಮ ಇಡೀ ವ್ಯವಸ್ಥೆ ನಕಾರಾತ್ಮಕ ಭಾವನೆಗಳಲ್ಲಿ ಮುಳುಗಿ ಹೋಗಿದೆ. ನಾನು ಪ್ರತೀ ಶಾಲೆಯಲ್ಲಿ ಸಾಮಾನ್ಯ ತೊಂದರೆಗಳಾದ ಜ್ವರ, ನೆಗಡಿ, ತಲೆನೋವು ಇತ್ಯಾದಿಗಳಿಗೆ ಬೇಕಾದ ಔಷಧಗಳುಳ್ಳ ಒಂದು ಮೆಡಿಕಲ್ ಕಿಟ್ ಇರಬೇಕೇಂದು ಮನವಿ ಮಾಡಿದೆ. ಜತೆಗೆ ಶಿಕ್ಷಕರಿಗೆ ಇದನ್ನು ಬಳಸುವದರ ಬಗ್ಗೆ ಎರಡು ದಿನಗಳ ತರಬೇತಿ ನೀಡಬೇಕೇಂದು ಸಲಹೆ ನೀಡಿದೆ. ಆದರೆ ಡಿ.ಇ.ಒ. "ಒಂದು ವೇಳೆ ತರಬೇತಿ ಪಡೆದ ಶಿಕ್ಷಕ ಮಗುವಿಗೆ ಹುಷಾರಿಲ್ಲದ ದಿನ ಬಂದಿಲ್ಲವೆಂದರೆ ಆ ಕಿಟ್ ಸ್ಪೋರ್ಟ್ಸ್ ಮತ್ತು ವಿಜ್ಞಾನದ ಕಿಟ್‌ಗಳು ವ್ಯರ್ಥವಾದಂತೆ ಇದೂ ಸುಮ್ಮನೆ ವ್ಯರ್ಥವಾಗುತ್ತದೆ" ಎಂದು ನನ್ನ ಸಲಹೆಯನ್ನು ಸಾರಾಸಗಟಾಗಿ ತಿರಸ್ಕರಿಸಿದರಲ್ಲದೆ ವಿಷಯಾಂತರಗೊಳಿಸಿ "ನಾನು ಯಾವುದೇ ಶಾಲೆಗೆ ಭೇಟಿ ನೀಡಿದರೂ, ಯಾವೊಬ್ಬ ಶಿಕ್ಷಕನೂ ತರಗತಿಯಲ್ಲಿ ಪಾಠ ಮಾಡುತ್ತಿರುವುದನ್ನು ಕಾಣವುದಿಲ್ಲ. ಒಂದು ವೇಳೆ ಯಾರಾದರೂ ಗೈರು ಹಾಜರಾಗಿರುವುದಾಗಲೀ, ಆ ಸಮಯದಲ್ಲಿ ಪಾಠ ಮಾಡದೇ ಇರುವುದಾಗಲೀ ನನಗೆ ಕಂಡು ಬಂದಲ್ಲಿ ಕಠಿಣ ಕ್ರಮ ಕೈಗೊಳ್ಳುತ್ತೇನೆ." ಎಂದರು.

ನಾನು ಸುಮ್ಮನಾದೆ. ಅವರ ಜತೆ ವಾದಿಸಿ ಪ್ರಯೋಜನವಿಲ್ಲ ಎಂದು ನನಗೆ ಗೊತ್ತು. ಪ್ರತೀ ಬಾರಿ ಶಿಕ್ಷಕರ ಸಮ್ಮೇಳನದಲ್ಲೂ ಅವರು ಶಿಕ್ಷಕರನ್ನುದ್ದೇಶಿಸಿ ಇದೇ ಮಾತುಗಳನ್ನು ಹೇಳುತ್ತಲೇ ಇರುತ್ತಾರೆ.

ಈ ಸಭೆಯಲ್ಲಿ ನೌಗಾಂವ್‌ನ ಎ.ಬಿ.ಎಸ್.ಎ ಆದ ಶ್ರೀ ಪಾಂಡೆಯವರು ಎರಡು ಮಹತ್ತರವಾದ ಸಲಹೆಗಳನ್ನು ತುಂಬಾ ವಿನಯವಾದ ದನಿಯಲ್ಲಿ ಆದರೆ ಅಷ್ಟೇ ಪ್ರಭಾವಯುತ ಮಾತುಗಳಲ್ಲಿ ಹೇಳಿದರು. ಮೊದಲನೆಯದು – ಒಬ್ಬನೇ ಶಿಕ್ಷಕ ಪದೇ ಪದೇ ಮುಖ್ಯ ತರಬೇತುದಾರನಾಗಿ ತರಬೇತಿ ನೀಡಬಾರದು. ಏಕೆಂದರೆ ಶಿಕ್ಷಕರಿಗೆ ಶಾಲೆಯಲ್ಲಿರಲು ಅವಕಾಶ ಮಾಡಿಕೊಡಬೇಕು. ಎರಡನೆಯದು – ಪರಿಹಾರ ಬೋಧನೆಯ ಪ್ರಯೋಗಗಳನ್ನು ಪ್ರಾರಂಭದ ಅವಧಿಯಲ್ಲಿಯೇ ಮಾಡಬೇಕು ಮತ್ತು ಚಳಿಗಾಲದಲ್ಲಿ ಇದು ತುಂಬಾ ಅವ್ಯವಹಾರಿಕವಾಗುವುದರಿಂದ ಚಳಿಗಾಲದಲ್ಲಿ ಇದನ್ನು ಮಾಡಬಾರದು. ಉಳಿದವರೆಲ್ಲರೂ ಯಥಾ ಪ್ರಕಾರ ತಮ್ಮ ತಮ್ಮ ಸಮಸ್ಯೆಗಳನ್ನು ಹೇಳಿದರು.

ಜಿಲ್ಲಾ ಸಮನ್ವಯಾಧಿಕಾರಿಗಳಾದ ಶ್ರೀ ಭಟ್‌ರವರ ಪ್ರಯತ್ನ ಉತ್ತಮವಾಗಿತ್ತು. ಈ ಸಭೆಯನ್ನು ಯಶಸ್ವಿಗೊಳಿಸಬೇಕೇಂಬ ಅವರ ತುಡಿತ ಸ್ಪಷ್ಟವಾಗಿ ಕಾಣುತ್ತಿತ್ತು. ಆದರೆ ಅವರ ತಂಡ ದುರ್ಬಲವಾಗಿದ್ದಾಗ ಅವರು ತಾನೆ ಏನು ಮಾಡಲಾದೀತು. ಶ್ರೀ ಭಟ್ ರವರ ನಿರೂಪಣೆಯೂ ಉತ್ತಮವಾಗಿತ್ತು.

3 ಗಂಟೆಗೆ ಸಭೆ ಮುಗಿಯಿತು. ನಾನು ಇಂದೇ ಧೌಂತರಿಗೆ ಹಿಂತಿರುಗಿದೆ.



## ಮೀನುಗಳು......

ಮೀನುಗಳು ಮೀಯುತ್ತವೆ
ಮೀನುಗಳು ಹರಿಯುವುದಿಲ್ಲ,
ಮೀನುಗಳು ಮೀಯುತ್ತವೆ.

ಮೀನುಗಳು ಮೀಯುತ್ತವೆ
ಮೀನುಗಳು ಹರಿಯುವುದಿಲ್ಲ
ಮೀನುಗಳು ಗಮ್ಯದೆಡೆಗೆ ಮೀಯುತ್ತವೆ

ಮೀನುಗಳು ಹರಿಯುವುದಿಲ್ಲ
ಮೀನುಗಳು ಮೀಯುತ್ತವೆ
ಮೀನುಗಳು ಹರಿವಿನ ವಿರುದ್ಧ ಮೀಯುತ್ತವೆ.

ಮಾನವರು ಹರಿಯುವರು
ಮಾನವರು ಮೀಯುವುದಿಲ್ಲ,
ಮಾನವರು ಹರಿವಿನೆಡೆಗೆ ಹರಿಯುವರು.

## 25-ಆಗಸ್ಟ್-2007

ಇಂದು 4 ಗಂಟೆಗೆ ಎದ್ದೆ. ಬ್ರಹ್ಮಕುಮಾರಿ ಆಶ್ರಮದಲ್ಲಿ ಸುಮಾರು ಒಂದು ಗಂಟೆ ಕಾಲ ಧ್ಯಾನ ಮಾಡಿದೆ. ಮನಸ್ಸನ್ನು ಗೊಂದಲಮಯ ಬಾಹ್ಯ ಜಗತ್ತಿನಿಂದ ನಮ್ಮಲ್ಲೇ ಅಂತರ್ಗತವಾಗಿರುವ ಜಗತ್ತಿನ ಕಡೆಗೆ ತೆಗೆದುಕೊಂಡು ಹೋಗುವುದು ಒಂದು ಸುಂದರವಾದ ಅನುಭೂತಿ. ಮನಸ್ಸು ದಿನವಿಡೀ ಪರಮ ಶಾಂತಿಯಿಂದ ಕೂಡಿರುತ್ತದೆ. ದಿನವಿಡೀ ತಾಜಾತನದಿಂದ, ಸ್ಥಿರಭಾವದಿಂದ ಇರುತ್ತದೆ. ಧ್ಯಾನವು ಮನಸ್ಸಿಗೆ ಶಕ್ತಿಯನ್ನು ಕೊಡುತ್ತದೆ. ಉಲ್ಲಾಸ ಹಾಗೂ ಸಮಾಧಾನ ಭಾವವನ್ನುಂಟು ಮಾಡುತ್ತದೆ. ಕಠಿಣ ಸನ್ನಿವೇಶಗಳಲ್ಲಿ ಸ್ಥಿತಪ್ರಜ್ಞೆಯಿಂದ ಇರುವ ಸಾಮರ್ಥ್ಯವನ್ನು ನೀಡುತ್ತದೆ.

5 ರಿಂದ 6 ರವರೆಗೆ ಪ್ರಾತಃವಿಧಿಗಳಲ್ಲಿ ನಿರತನಾದೆ. 6 ಗಂಟೆಗೆ ಪುನಃ ಆಶ್ರಮದ ಸತ್ಸಂಗದ ತರಗತಿಗಳಲ್ಲಿ ಕುಳಿತೆ. ಇದರಲ್ಲಿ ಅರ್ಧಗಂಟೆ ಧ್ಯಾನ ಮತ್ತು ಒಂದು ಗಂಟೆ ಪ್ರವಚನವಿರುತ್ತದೆ. ಪ್ರವಚನದಲ್ಲಿ ಈಶ್ವರೀಯ ವಾಕ್ಯಗಳನ್ನು ಓದುತ್ತಾರೆ ಮತ್ತು ಅವುಗಳ ಬಗ್ಗೆ ಚರ್ಚೆ ನಡೆಯುತ್ತದೆ. ಮಾನವೀಯ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳುವಲ್ಲಿ ಏನೇನು ಅಡ್ಡಿ ಆತಂಕಗಳು ಎದುರಾಗುತ್ತವೆ ಅಥವಾ ಮಾನವೀಯ ಮೌಲ್ಯಗಳಿಗೆ ಬದ್ಧರಾಗುವುದರಿಂದ ಜೀವನ ಯಾವ ರೀತಿ ಸುಗಂಧಮಯವಾಗುತ್ತದೆ ಎಂಬುದರ ಕುರಿತು ಚರ್ಚೆ ನಡೆಯುತ್ತದೆ. ಒಂದು ಗಂಟೆಯ ಈ ಚರ್ಚೆ ಬಹಳ ಚೇತೋಹಾರಿಯಾಗಿರುತ್ತದೆ. ಇದರಿಂದ ಇಡೀ ದಿನಕ್ಕೆ ಬೇಕಾಗುವಷ್ಟು ಚೈತನ್ಯ ದೊರೆಯುತ್ತದೆ.

ಮುಂಜಾನೆ 7 ಗಂಟೆಯ ಬಸ್‌ನಲ್ಲಿ ಹೊರಟು 9–15ಕ್ಕೆ ಧೌಂತರಿ ತಲುಪಿದೆ ಮತ್ತು ಸೀದಾ ಶಾಲೆಗೆ ಹೊರಟೆ. ಶಾಲೆಯಲ್ಲಿ ಬಿಂದು ಇದ್ದಳು. ಅವಳು ಏನನ್ನೋ ಓದಿಸುತ್ತಿದ್ದಳು. ಅಡುಗೆಯವರು ಅಡುಗೆ ಮಾಡುತ್ತಿದ್ದರು. ನಾನು ಇಂದು ಒಂದೂ ತರಗತಿ ತೆಗೆದುಕೊಳ್ಳಲಿಲ್ಲ. ಸೋಮವಾರ 27ನೇ ತಾರೀಖಿನಂದು ಬಿ.ಆರ್.ಸಿ.ಯಲ್ಲಿ ಎಮ್.ಡಿ.ಎಮ್ ಆಡಿಟ್ ಇದೆ. ಆದ್ದರಿಂದ ಎಮ್.ಡಿ.ಎಮ್. ರಸೀದಿಗಳನ್ನು ಒಮ್ಮೆ ಪರಿಶೀಲಿಸಿದೆ ಮತ್ತು ಅವುಗಳನ್ನು ಪೂರ್ತಿಗೊಳಿಸಿದೆ. ಎಮ್.ಡಿ.ಎಮ್(ಮಿಡ್ ಡೇ ಮೀಲ್ಸ್) 2003 ರಲ್ಲಿ ಪ್ರಾರಂಭವಾಯಿತು. ಅಂದಿನಿಂದ ಇಂದಿನವರೆಗೆ ಆಡಿಟ್ ಆಗಿರಲಿಲ್ಲ. ಹಾಗಾಗಿ 2003 ರಿಂದ ಇಲ್ಲಿವರೆಗಿನ ಬಿಲ್‌ಗಳು, ಕ್ಯಾಶ್ ಬುಕ್ ಮತ್ತು ಲೆಡ್ಜರ್ ಪುಸ್ತಕಗಳನ್ನು ಅವಲೋಕಿಸಿದೆ. ಹಿಂದಿನ ಮುಖ್ಯೋಪಾಧ್ಯಾಯರು ಅವುಗಳನ್ನು ನಿರ್ವಹಿಸಿದ್ದ ರೀತಿ ತುಂಬಾ ಅವ್ಯವಸ್ಥಿತವಾಗಿತ್ತು. ಆದ್ದರಿಂದ ಅವುಗಳೆಲ್ಲವನ್ನೂ ನನ್ನದೇ ಆದ ರೀತಿಯಲ್ಲಿ ಸರಿಪಡಿಸಿದೆ. ಇಡೀ ದಿನ ಇದೇ ಕೆಲಸದಲ್ಲಿ ಕಳೆದುಹೋಯಿತು.

## 26-ಆಗಸ್ಟ್-2007

ಇಂದು ಭಾನುವಾರ ದಿನವಿಡೀ ಮನೆಯಲ್ಲೇ ಇದ್ದೆ. ಎಮ್.ಡಿ.ಎಮ್. ನ ದಾಖಲೆಗಳನ್ನು ಮತ್ತೊಮ್ಮೆ ಪರಿಶೀಲಿಸಿದೆ. ಅಪೂರ್ಣವಾಗಿದ್ದ ಬಿಲ್‌ಗಳನ್ನು ಪೂರ್ಣಗೊಳಿಸಿದೆ. ಇಂದೂ ಸಹ ಈ ಉಳಿದ ಕೆಲಸವನ್ನು ಪೂರ್ತಿಗೊಳಿಸಲು ಕಳೆದುಹೋಯಿತು. ಸಹೋದರಿ ವ್ಯಾಸಳ ಎಮ್.ಡಿ.ಎಮ್. ಕಾರ್ಯವೂ ಸಹ ಅಪೂರ್ಣವಾಗಿತ್ತು. ಅದನ್ನೂ ಸಹ ಪೂರ್ತಿಗೊಳಿಸಿದೆ. ಕೆಲವು ತಿಂಗಳುಗಳ ದಾಖಲೆಗಳು ಪೂರ್ಣಗೊಂಡಿರಲಿಲ್ಲ. ಅವಳ ಸಹಾಯದಿಂದ ಕ್ಯಾಶ್ ಬುಕ್, ಬಿಲ್‌ಗಳು ಗಾರ್ಡ್ ಫೈಲ್‌ಗಳು ಮತ್ತು ಲೆಡ್ಜರ್ ಪುಸ್ತಕಗಳನ್ನು ಆಡಿಟ್‌ಗಾಗಿ ಪೂರ್ತಿಗೊಳಿಸಿದೆ.



## 27-ಆಗಸ್ಟ್-2007

ಇಂದು ಎಮ್.ಡಿ.ಎಮ್ ಆಡಿಟ್‌ಗಾಗಿ ಬಿ.ಆರ್.ಸಿ. ಡುಂಡಕ್ಕೆ ಹೋದೆ. ಇಂದು ಶಾಲೆಯಲ್ಲಿ ಒಬ್ಬನೇ ಇದ್ದ ಕಾರಣ ರಜೆ ನೀಡಬೇಕಾಯಿತು. ಮುಂಜಾನೆ 7 ಗಂಟೆಗೆ ಮನೆ ಬಿಟ್ಟೆ. 11 ಗಂಟೆಗೆ ಬಿ.ಆರ್.ಸಿ ತಲುಪಿದೆ. ನಮ್ಮ ಶಾಲೆಯಿಂದ ಬಿ.ಆರ್.ಸಿ.ಗೆ 65 ಕಿ.ಮೀ ದೂರವಿದೆ.

ಆ ವೇಳೆಗಾಗಲೇ ಲೆಕ್ಕ ಪರಿಶೋಧಕರು ಉಪಸ್ಥಿತರಿದ್ದರು. ಅಲ್ಲಿ ಇಬ್ಬರು ಆಡಿಟರ್‌ಗಳಿದ್ದರು. ಇಬ್ಬರ ಬಳಿಯೂ ಶಿಕ್ಷಕರು ಎರಡೆರಡು ಸಾಲುಗಳಲ್ಲಿ ನಿಂತಿದ್ದರು. ಪ್ರತಿಯೊಬ್ಬರೂ ತಮ್ಮ ಆಡಿಟ್ ಮೊದಲು ಮಾಡಿಸಬೇಕೆಂದು ಆತುರರಾಗಿದ್ದರು.

ಆಡಿಟ್‌ಗಾಗಿ ಬಿ.ಆರ್.ಸಿ.ಯಲ್ಲಿ ಕಮೀಷನ್ ತೆಗೆದುಕೊಳ್ಳುತ್ತಿದ್ದರು. ಕಮೀಷನ್ ಕೊಟ್ಟ ನಂತರ ಆ ಶಿಕ್ಷಕರಿಗೆ ಒಂದು ಚೀಟಿ ಕೊಡುತ್ತಿದ್ದರು. ಆ ಚೀಟಿ ನೋಡಿದ ನಂತರವೇ ಆಡಿಟರ್‌ಗಳು ನಮ್ಮ ದಾಖಲೆಗಳನ್ನು ತೆಗೆದುಕೊಳ್ಳುತ್ತಿದ್ದರು. ಆಡಿಟ್ ಪೂರ್ತಿಯಾದ ಮೇಲೆ ಪೂರ್ವ ನಿಗದಿತ ಕಮೀಷನ್‌ನ್ನು ಆಡಿಟರ್‌ಗಳಿಗೆ ಕೊಟ್ಟು ಉಳಿದಿದ್ದನ್ನು ಬಿ.ಆರ್.ಸಿ ಅಧಿಕಾರಿಗಳು ಹಂಚಿಕೊಳ್ಳುತ್ತಿದ್ದರು. ಕಮೀಷನ್‌ನ್ನು ಪ್ರತೀ ಶಾಲೆಗೂ ನಿಗದಿಪಡಿಸಲಾಗಿತ್ತು. ಶಾಲೆಯಲ್ಲಿ ಮಕ್ಕಳ ಸಂಖ್ಯೆಯ ಆಧಾರದ ಮೇಲೆ ಅಥವಾ ಆಡಿಟ್ ಮಾಡಬೇಕಾದ ದಾಖಲೆಗಳ ಆಧಾರದ ಮೇಲೆ ಅಥವಾ ಒಂದು ಅಂದಾಜು ಪ್ರಕಾರ ಕಮೀಷನ್ ನಿಗದಿಯಾಗುತ್ತಿತ್ತು. ಈ ಬಾರಿ ಮಕ್ಕಳ ಆಧಾರದಲ್ಲಿ ನಿಗದಿಗೊಳಿಸಲಾಗಿತ್ತು. 30 ಮಕ್ಕಳಿದ್ದಲ್ಲಿ 300 ರೂ. 30–50 ವಿದ್ಯಾರ್ಥಿಗಳಿದ್ದಲ್ಲಿ 500 ರೂ. 50 ರಿಂದ 100 ಮಕ್ಕಳಿದ್ದಲ್ಲಿ 600 ರೂ. ಮತ್ತು 100ಕ್ಕಿಂತ ಹೆಚ್ಚು ವಿದ್ಯಾರ್ಥಿಗಳಿರುವ ಶಾಲೆಗಳಿಗೆ 700 ರೂ. ಗಳಂತೆ ನಿಗದಿ ಮಾಡಲಾಗಿತ್ತು.

ಆರಂಭದಲ್ಲಿ ಶಿಕ್ಷಕರು ಕಮೀಷನ್ ನೀಡಲು ವಿರೋಧಿಸಿದರು. ಕೆಲವರು ಜೋರಾಗಿಯೇ ಗಲಾಟೆ ಮಾಡಿದರು. ಕೆಲವರು ತಮ್ಮ ನಾಯಕತ್ವವನ್ನೂ ಪ್ರದರ್ಶಿಸಿದರು ಆದರೆ ಯಾರೂ ಕಮೀಷನ್ ಕೊಡದೆ ಆಡಿಟ್ ಮಾಡಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಏಕೆಂದರೆ ಶಿಕ್ಷಕರ ದಾಖಲೆಗಳನ್ನು ಪರಿಶೀಲಿಸಿ ಉದ್ದನೆಯ ಪಟ್ಟಿಯೊಂದನ್ನು ಕೊಡುತ್ತಾರೆ. ಅದು ದಾಖಲೆಗಳಲ್ಲಾಗಿರುವ ದೋಷಗಳ ಪಟ್ಟಿ. ಅವುಗಳನ್ನು ಸರಿಪಡಿಸಿಕೊಂಡು ಬರಲು ಹೇಳುತ್ತಾರೆ. ವಾಸ್ತವವೇನೆಂದರೆ ಅವುಗಳನ್ನು ಯಾರೂ ಸರಿಪಡಿಸಲಾಗುವುದಿಲ್ಲ. ಕಾರಣವಿಷ್ಟೇ ಶಾಲೆಗೆ ಒಂದು ಅನುದಾನವನ್ನು ಬಿಡುಗಡೆ ಮಾಡಿದಾಗ ಅದನ್ನು ಯಾವ ರೀತಿ, ಯಾವುದಕ್ಕಾಗಿ ಖರ್ಚು ಮಾಡಬೇಕೆಂಬ ಸ್ಪಷ್ಟ ನಿರ್ದೇಶನ ನೀಡುವುದಿಲ್ಲ. ಅದರಲ್ಲೂ ವಿಶೇಷವಾಗಿ ಕಾಮಗಾರಿಗೆ ಸಂಬಂಧಿಸಿದಂತೆ. ಪ್ರತಿ ಶಾಲೆಗೂ ತನ್ನದೇ ಆದ ಸ್ಥಳೀಯ ಸಮಸ್ಯೆಗಳಿರುತ್ತವೆ. ಶಿಕ್ಷಣ ಸಮಿತಿಯ ಸದಸ್ಯರು, ಗ್ರಾಮ ಪ್ರಧಾನರು, ಪೋಷಕರು ಮತ್ತು ಕೆಲವೊಮ್ಮೆ ಸಹೊದ್ಯೋಗಿಗಳು ಸಹ ಅದನ್ನು ಹೇಗೆ? ಯಾವ ಕೆಲಸಕ್ಕೆ ಎಷ್ಟು? ಮತ್ತು ಯಾವ ರೀತಿ ಖರ್ಚು ಮಾಡಬೇಕೆಂಬುದರ ಬಗ್ಗೆ ವಿಭಿನ್ನ ನಿಲುವುಗಳನ್ನು ಹೊಂದಿರುತ್ತಾರೆ.

ಅನೇಕ ಶಾಲೆಗಳಲ್ಲಿ ಗ್ರಾಮ ಪ್ರಧಾನರೇ ಕಾಮಗಾರಿ ಕೆಲಸವನ್ನು ನಿಯಂತ್ರಿಸುತ್ತಾರೆ. ಕೆಲಸವನ್ನು ಅಲ್ಲಿನ ಅಗತ್ಯಕ್ಕೆ ತಕ್ಕಂತೆ ಮಾಡಿಸಬೇಕಾಗುತ್ತದೆ. ಆದರೆ ರಸೀದಿಗಳನ್ನು ಮಾತ್ರ ನಿರ್ದಿಷ್ಟ ಮಾದರಿಯಲ್ಲೇ ನಿರ್ವಹಿಸಬೇಕಾಗುತ್ತದೆ. ಅವಶ್ಯಕ ಪರಿಕರಗಳಾದ ಸಿಮೆಂಟ್, ಕಲ್ಲು, ಜೆಲ್ಲಿ, ಮರಳು, ಕಬ್ಬಿಣ, ಬಣ್ಣ ಇತ್ಯಾದಿ ಶಾಲಾ ಅಗತ್ಯಗಳಿಗೆ ಅನುಗುಣವಾಗಿ ಖರೀದಿಸುವುದು ಸಹಜ. ಆದರೆ ಕೊನೆಗೆ ಬಿಲ್‌ಗಳನ್ನು ಮಾತ್ರ ಆಡಿಟರ್ ಮತ್ತು ಜೆ.ಇ ರವರ ನಿರ್ದೇಶನದಂತೆ ಹೊಂದಿಸಬೇಕು. ಒಂದು ವೇಳೆ ಕೆಲಸವು ಗ್ರಾಮ ಪ್ರಧಾನರು / ಶಿಕ್ಷಣ ಸಮಿತಿಯ ಅಧ್ಯಕ್ಷರ ಕಡೆಯಿಂದ ಮಾಡಿಸಲ್ಪಟ್ಟಿದ್ದರೆ ಒಂದು ರೀತಿಯಲ್ಲಿ ಅವರೇ ಗುತ್ತಿಗೆದಾರರಾಗಿರುತ್ತಾರೆ. ಈ ಮೂಲಕ ಅವರು ಸ್ವಲ್ಪ ಹಣ ಮಾಡಲು ಬಯಸುತ್ತಾರೆ. ಒಂದು ವೇಳೆ ಮುಖ್ಯ ಶಿಕ್ಷಕರೇನಾದರೂ ಈ ಕೆಲಸದ ಜವಾಬ್ದಾರಿ ವಹಿಸಿಕೊಂಡರೆ ಅವರು ಕೆಲಸದಾಳುಗಳನ್ನು ಮತ್ತು ಕೆಲಸದ ಗುಣಮಟ್ಟವನ್ನು ಗಮನಿಸಬೇಕಾಗುತ್ತದೆ. ಅಂದರೆ ಆ ಅವಧಿಯಲ್ಲಿ ತರಗತಿಗಳನ್ನು ಖಾಲಿ ಬಿಡಬೇಕಾಗುತ್ತದೆ ಅಲ್ಲದೆ ಈ ಕೆಲಸದ ನಿಮಿತ್ತ ಹೆಚ್ಚಿನ ಸಮಯವನ್ನು ಕಳೆಯಬೇಕಾಗುತ್ತದೆ. ಶಾಲಾ ಅವಧಿಯ ನಂತರವೂ ಅಲ್ಲೇ ಇದ್ದು ಕೆಲಸದ ಮೇಲೆ ನಿಗಾ ಇಡಬೇಕಾಗುತ್ತದೆ, ಕೆಲಸದವರಿಗಾಗಿ ಊರೊಳಗೆ ಹೋಗುತ್ತಿರಬೇಕಾಗುತ್ತದೆ ಅಥವಾ ಬೇಕಾದ ಸಾಮಗ್ರಿಗಳಿಗಾಗಿ ಪಟ್ಟಣಕ್ಕೆ ಹೋಗುತ್ತಿರಬೇಕಾಗುತ್ತದೆ.

ಕೆಲವೊಮ್ಮೆ ಸಣ್ಣ ಪುಟ್ಟ ಕೆಲಸಕ್ಕಾಗಿ ತರಗತಿಗಳನ್ನು ಬಿಟ್ಟು ಪಟ್ಟಣಕ್ಕೆ ಹೋಗಬೇಕಾಗುತ್ತದೆ. ಸಾಮಾನ್ಯವಾಗಿ ಪಟ್ಟಣವು ಶಾಲೆಯಿಂದ ಅನೇಕ ಕಿ.ಮೀ.ಗಳಷ್ಟು ದೂರವಿರುತ್ತದೆ. ಎಷ್ಟೋ ಸಲ ಸ್ವಂತ ಹಣದಿಂದ ಕಟ್ಟಡ ಸಾಮಗ್ರಿಗಳನ್ನು ಖರೀದಿಸಬೇಕಾಗುತ್ತದೆ. ಸಾಮಾನ್ಯವಾಗಿ ಇಂಥ ಕೆಲಸಗಳನ್ನು ಶಿಕ್ಷಕಿಯರು ಮಾಡಲಾಗುವುದಿಲ್ಲ. ಅನೇಕ ಶಿಕ್ಷಕರೂ ಇಂತಹ ಕೆಲಸಗಳನ್ನು ವಹಿಸಿಕೊಳ್ಳುವುದರಿಂದ ದೂರವಿರುತ್ತಾರೆ. ಅವರು ಇಂಥ ಕಾಮಗಾರಿ ಕೆಲಸಗಳನ್ನು ಗ್ರಾಮ ಪ್ರಧಾನರಿಗೆ ಅಥವಾ ಇನ್ಯಾರಾದರೂ ಮುಂದೆ ಬಂದರೆ ಅವರನ್ನೇ ನಾಯಕರನ್ನಾಗಿಸಿ ಅವರಿಗೆ ಜವಾಬ್ದಾರಿ ವಹಿಸಿಬಿಡುತ್ತಾರೆ. ಇಂತಹವರಿಗೆ ಗುಣಮಟ್ಟದ ಅಗತ್ಯವಿರುವುದಿಲ್ಲ.

ಇತ್ತೀಚೆಗೆ ಹಳ್ಳಿಗಳಲ್ಲಿ ಕೆಟ್ಟ ಪರಂಪರೆಯೊಂದು ಬೆಳೆಯುತ್ತಿದೆ. ಯಾವ ವ್ಯಕ್ತಿ ಅಥವಾ ಕುಟುಂಬ ಶಾಲೆಗಾಗಿ ಜಮೀನನ್ನು ದಾನವಾಗಿ ಕೊಟ್ಟಿರುತ್ತಾರೊ ಅವರು ಆ ಸ್ಥಳದಲ್ಲಿ ಬೇರೆಯವರನ್ನು ಕೆಲಸ ಮಾಡಲು ಬಿಡುವುದಿಲ್ಲ. ಅವರೇ ಗುತ್ತಿಗೆ ಪಡೆದು ಕೆಲಸ ಮಾಡಿಸುತ್ತಾರೆ. ಶಿಕ್ಷಕರು ಅಸಹಾಯಕರಾಗಿರುತ್ತಾರೆ. ಅವರು ಅನವಶ್ಯಕ ವಿವಾದಗಳಿಗೆ ಸಿಲುಕಲು ಬಯಸುವುದಿಲ್ಲ. ಇಂತಹ ಪರಿಸ್ಥಿತಿಗಳು ತಮ್ಮ ಇಲಾಖೆಯಿಂದ ಶಾಲೆಗೆ ನೀಡಿರುವ ಅನುದಾನವನ್ನು ತಮ್ಮ ಯೋಜನೆಗಳಿಗೆ ಅನುಸಾರ ಖರ್ಚು ಮಾಡಲಾಗದಂತೆ ಶಿಕ್ಷಕರ ಕೈಗಳನ್ನು ಕಟ್ಟಿ ಹಾಕಿರುತ್ತವೆ. ಶಿಕ್ಷಕರ ಪಾತ್ರ ಕೇವಲ ಚೆಕ್‌ಗೆ ಸಹಿ ಮಾಡುವುದು, ಬ್ಯಾಂಕ್‌ನಿಂದ ಹಣ ತಂದುಕೊಡುವುದಕ್ಕೆ ಮಾತ್ರ ಸೀಮಿತವಾಗುತ್ತದೆ. ಕೆಲವು ಶಿಕ್ಷಕರು ಇಂತಹ ದಯನೀಯ ವ್ಯವಸ್ಥೆ ವಿರುದ್ಧ ಪ್ರತಿಭಟಿಸುತ್ತಾರೆ. ತಮ್ಮ ಸಾಮರ್ಥ್ಯಕ್ಕನುಗುಣವಾಗಿ ಉತ್ತಮ ಕೆಲಸಗಳನ್ನು ಮಾಡಿಸಿದ್ದಾರೆ. ಆದರೆ ಕಮೀಷನ್ ಎಂಬ ವಿಷ ಸರಪಳಿಯಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳಲಾಗಿಲ್ಲ. ಹೀಗೆ ಶಾಲೆಯಿಂದ ಪ್ರಾರಂಭವಾಗುವ ಸರಪಳಿ ಆಡಿಟ್‌ನಲ್ಲಿ ಕೊನೆಗೊಳ್ಳುತ್ತದೆ.

ಈ ದೋಷ ಸಮಾಜದಲ್ಲಿ ಗಟ್ಟಿಯಾಗಿ ನೆಲೆಯೂರಿಬಿಟ್ಟಿದೆ. ಇದನ್ನು ಸುಧಾರಿಸುವ ಮಾರ್ಗಗಳೂ ನಮಗೆ ಕಾಣುತ್ತಿಲ್ಲ. ಜಿಲ್ಲಾ ಮಟ್ಟದ ಅಥವಾ ರಾಜ್ಯ ಮಟ್ಟದ ಕಾರ್ಯಾಗಾರಗಳಲ್ಲಿ ಒಂದು ಮನವಿ ಸಲ್ಲಿಸಬೇಕೆಂದು ನನಗೆ ಅನೇಕ ಬಾರಿ ಅನಿಸಿದೆ. ಏನೆಂದರೆ ನಮಗೆ ಸಂಬಂಧಿಸಿದ ಎಲ್ಲಾ ಇಲಾಖೆಗಳು ಏಕರೂಪದ ಕಮೀಷನ್ ಅನ್ನು ನಿರ್ಧರಿಸಿ ಅದನ್ನು ವಸೂಲಿ ಮಾಡಲು ಸಿ.ಆರ್.ಪಿ.ಗಳಿಗೆ ಒಪ್ಪಿಸಿಬಿಡಬೇಕು. ಅನೇಕ ಸಲ ಪರೋಕ್ಷವಾಗಿ ಅವರು ಈ ಕೆಲಸ ಮಾಡುತ್ತಲೂ ಇದ್ದಾರೆ. ಇದರಿಂದ ಶಿಕ್ಷಕರ ಸಮಯವೂ ಉಳಿಯುತ್ತದೆ, ಕಛೇರಿಗೆ ಸುತ್ತುವುದರಿಂದ, ಕಾರ್ಮಿಕರ ಉಪೇಕ್ಷೆಯಿಂದ ಹಾಗೂ ಅನೇಕ ಸಲ ಅಧಿಕಾರಿಗಳ ಧಮಕಿಗಳಿಂದಲೂ ಶಿಕ್ಷಕರಿಗೆ ಮುಕ್ತಿ ದೊರೆಯುತ್ತದೆ. ಆದರೂ ಇಂತಹ ಕೆಲಸಗಳನ್ನು ಮಾಡುವುದರಲ್ಲಿ ರುಚಿ ಕಂಡುಕೊಂಡಿರುವ ಶೇ.2–3 ರಷ್ಟು ಶಿಕ್ಷಕರು ಮಾತ್ರ ಇವುಗಳನ್ನು ನಿರ್ವಹಿಸಲು ಈಗಲೂ ಉತ್ಸುಕರಾಗಿದ್ದಾರೆ. ಉಳಿದವರು ಇಂತಹ ಕಂಟ್ರಾಕ್ಟರ್ ಕೆಲಸಗಳಿಂದ ಮತ್ತು ಅನ್ನ ಸಾಂಬಾರ್‌ನ ಲೆಕ್ಕಗಳನ್ನು ಬರೆಯುತ್ತಾ ಸಮಯ ವ್ಯರ್ಥ ಮಾಡುವ ಕೆಲಸಗಳಿಂದ ದೂರವಿರಲು ಬಯಸುತ್ತಾರೆ.

ದಿನಾಂಕ 28–08–2007 ರಂದು 63 ಮಕ್ಕಳ ಬಿಸಿಯೂಟದ ಆಡಿಟ್ ಮಾಡಿಸಲು ನಾನೂ ಸಹ ಎ.ಬಿ.ಆರ್.ಸಿ.ಗೆ 500ರೂ.ಗಳನ್ನು ಕೊಡಬೇಕಾಯಿತು. ಆಡಿಟರ್ ಕೆಂಪು ಪೆನ್‌ನಲ್ಲಿ ಎಲ್ಲಾ ವಹಿಗಳಿಗೆ ಟಿಕ್ ಮಾಡಿದರು ಆದರೆ ಎಲ್ಲೂ ಸಹಿ ಮಾಡಲಿಲ್ಲ, ನಂತರ ಮನೆಗೆ ಹಿಂತಿರುಗಿದೆ.

ನಂತರ ನನ್ನ ಕೆಲವು ಸಹೋದ್ಯೋಗಿ ಮಿತ್ರರು ಹೇಳಿದರು; ಆಡಿಟರ್‌ಗಳು ಉಳಿದ ಶಿಕ್ಷಕರನ್ನು ಕುಳಿತುಕೊಳ್ಳಲು ಹೇಳಿ ಅವರಿಗೆ ಕ್ಯಾಶ್ ಬುಕ್ ಬರೆಯುವುದು ಹೇಗೆ? ಲೆಡ್ಜರನ್ನು ಹೇಗೆ ನಿರ್ವಹಿಸಬೇಕು? ಎಂಬಿತ್ಯಾದಿ ವಿಷಯಗಳನ್ನು ತಿಳಿಸಿದರಂತೆ. ಒಂದು ವೇಳೆ ನಾನು ಮಧ್ಯಾಹ್ನ 1–00 ಗಂಟೆಗೆ ಮನೆಗೆ ಹಿಂತಿರುಗಿರದಿದ್ದರೆ ಅಂದು ಅಲ್ಲೇ ಉಳಿದುಕೊಳ್ಳಬೇಕಾದ ಪರಿಸ್ಥಿತಿ ಉಂಟಾಗುತ್ತಿತ್ತು. ಆಗ ಈಗಾಗಿರುವ ಖರ್ಚಿನ ಜೊತೆಗೆ ಹೋಟೆಲ್ ಖರ್ಚಿನ ಹೊರೆ ಸಹ ಬೀಳುತ್ತಿತ್ತು. ಬಿ.ಆರ್.ಸಿ.ಗೆ ಬರಲು ಶಿಕ್ಷಕರಿಗೆ ಪ್ರಯಾಣ ಭತ್ಯೆಯನ್ನೂ ನೀಡುವುದಿಲ್ಲ. ತಮ್ಮ ಜೇಬಿನಿಂದಲೇ ಹಾಕಬೇಕಾಗುತ್ತದೆ.



## 6–ಸೆಪ್ಟೆಂಬರ್–2007

ಇಂದು 7–00 ಗಂಟೆಗೆ ಶಾಲೆ ತಲುಪಿದೆ. ಇತ್ತೀಚೆಗೆ ವಿದ್ಯಾ ಕೇಂದ್ರದ ಶಿಕ್ಷಕಿಯೂ ಸಹ ತಮ್ಮ ಕೇಂದ್ರವನ್ನು ಶಾಲೆಯಲ್ಲೇ ನಡೆಸುತ್ತಿದ್ದಾಳೆ. ಇತ್ತೀಚೆಗೆ ಹಳ್ಳಿಯ ಜನರು ತಮ್ಮ ದನಕರುಗಳ ಸಮೇತ ಎತ್ತರದ ಬೆಟ್ಟ ಪ್ರದೇಶಕ್ಕೆ ಹೋಗಿದ್ದಾರೆ. ಮಳೆಗಾಲದಲ್ಲಿ ಸಾಮಾನ್ಯವಾಗಿ ಈ ಹಳ್ಳಿಯ ಕುಟುಂಬಗಳೆಲ್ಲಾ ತಮ್ಮ ವಸತಿಯನ್ನು ಎತ್ತರದ ಪ್ರದೇಶಕ್ಕೆ ವರ್ಗಾಯಿಸುತ್ತಾರೆ. ಅಲ್ಲಿ ಅವರು ತಾತ್ಕಾಲಿಕ ವಸತಿಗೃಹಗಳನ್ನು ನಿರ್ಮಿಸಿಕೊಂಡಿದ್ದಾರೆ. ಈಗ ಅಲ್ಲಿ ದನಗಳಿಗೆ ಹೇರಳವಾಗಿ ಮೇವು ಸಿಗುವುದರಿಂದ ಸಾಕಷ್ಟು ಹಾಲು ಕೊಡುತ್ತವೆ. ಬೆಟ್ಟದ ಮೇಲೆಯೂ ಅವರಿಗೆ ತೋಟಗಳಿವೆ. ದನಗಳನ್ನೂ ಒಯ್ಯುವುದರಿಂದ ತೋಟಗಳಿಗೆ ಬೇಕಾದ ಗೊಬ್ಬರವೂ ದೊರೆಯುತ್ತದೆ. ಕೆಲವರಿಗೆ ಸೇಬು, ಪೀಚ್ ಹಣ್ಣಿನ ತೋಟಗಳಿವೆ. ಬೆಟ್ಟದ ಇಳಿಜಾರಿನಲ್ಲಿ ಕೆಲವರು ಆಲೂಗಡ್ಡೆ, ಹಸಿರು ಬಟಾಣಿ ಬೆಳೆಗಳನ್ನು ಬೆಳೆಯುತ್ತಾರೆ. ಇವು ಅವರಿಗೆ ಸಾಕಷ್ಟು ಲಾಭ ತಂದುಕೊಡುವ ವಾಣಿಜ್ಯ ಬೆಳೆಗಳಾಗಿವೆ.

ಬೆಟ್ಟದ ಎತ್ತರದ ಪ್ರದೇಶಗಳಲ್ಲಿ ಮೆಟ್ಟಿಲು ದಿಬ್ಬಗಳನ್ನು ನಿರ್ಮಿಸಿ ಭಾಂಗ್ (ಹಶಿಶ್/ಚರಸ್– ಒಂದು ಬಗೆಯ ನಾರಿನ ಗಿಡ, ಮಾದಕ ದ್ರವ್ಯಗಳಲ್ಲಿ ಬಳಸುತ್ತಾರೆ) ಬೆಳೆಯನ್ನು ಬೆಳೆಯುತ್ತಾರೆ. ಸೆಪ್ಟೆಂಬರ್ ವೇಳೆಗೆ ಬೆಳೆ ಕೊಯ್ಲಿಗೆ ಬಂದಿರುತ್ತದೆ. ಸೆಪ್ಟೆಂಬರ್‌ನ ಬಿಸಿಲಿನಲ್ಲಿ ಒಣಗಿಸಿ ಅಂಗೈಗಳಿಂದ ಉಜ್ಜಿ ಪುಡಿ ಮಾಡಿ ಹಶಿಶ್/ಚರಸ್ ತಯಾರಿಸುತ್ತಾರೆ. ಇದನ್ನು ಅಕ್ರಮವಾಗಿ ಹೆಚ್ಚಿನ ಬೆಲೆಗೆ ಮಾರಿ ಹಣ ಗಳಿಸುತ್ತಾರೆ.

ಮಕ್ಕಳೂ ಸಹ ತಮ್ಮ ಪರಿವಾರದ ಜೊತೆ ಹೋಗುತ್ತಾರೆ. ಹಾಗಾಗಿ ಮನೆಯಿಂದ ಶಾಲೆ 5–7 ಕಿ.ಮೀ. ದೂರವಾಗುತ್ತದೆ. ವಿದ್ಯಾಕೇಂದ್ರ (ಅಂಗನವಾಡಿ), 1 ಮತ್ತು 2ನೆಯ ತರಗತಿ ಮಕ್ಕಳಿಗೆ ಇಷ್ಟು ದೂರ ನಡೆಯುವುದು ತುಂಬಾ ಶ್ರಮದಾಯಕವಾದುದು. ಶಾಲೆಗೆ ಬಂದು ಮನೆಗೆ ಹಿಂತಿರುಗಿ ಹೋಗುವುದು ಕನಿಷ್ಟ 10 ಕಿ.ಮೀ.ನ ಹಾದಿಯಾಗುತ್ತದೆ. ಹೀಗಾಗಿ ಚಿಕ್ಕ ಮಕ್ಕಳ ಹಾಜರಾತಿ ಗಣನೀಯವಾಗಿ ಕಡಿಮೆಯಾಗುತ್ತಿತ್ತು. ಹಾಗಾಗಿ ವಿದ್ಯಾಕೇಂದ್ರಕ್ಕೆ ಒಂದೇ ಒಂದು ಮಗುವೂ ಬರುತ್ತಿರಲಿಲ್ಲ. ಹಾಗಾಗಿ ಅಲ್ಲಿನ ಶಿಕ್ಷಕಿ ನಮ್ಮ ಶಾಲೆಯಲ್ಲೇ ಬೋಧಿಸುತ್ತಿದ್ದರು. ಈ ಪರಿಸ್ಥಿತಿ ಅಕ್ಟೋಬರ್ ವರೆಗೂ ಮುಂದುವರೆಯುತ್ತದೆ. ಒಂದು ವೇಳೆ ಚಳಿ ತುಂಬಾ ಇದ್ದರೆ ನವೆಂಬರ್ ಮೊದಲ ವಾರದವರೆಗೂ ಮುಂದುವರೆಯುತ್ತಿತ್ತು.

ನವೆಂಬರ್‌ನಲ್ಲಿ ಮೇಲೆ ಆಲೂಗಡ್ಡೆ, ಸಾಸಿವೆ ಮತ್ತು ಕೆಳಗಿನ ತೋಟಗಳಲ್ಲಿ ಗೋಧಿಯನ್ನೂ ಬೆಳೆಯುತ್ತಾರೆ. ಸೆಪ್ಟೆಂಬರ್–ಅಕ್ಟೋಬರ್‌ನಲ್ಲಿ ಹಾಜರಾತಿ 63ಕ್ಕೆ 10–30ರ ಮೇಲೆ ಹೋಗುವುದಿಲ್ಲ. ಈ ಎರಡು ತಿಂಗಳಲ್ಲಿ ಪೋಷಕರು ಬಂದು "ಗುರೂಜಿ, ದಯವಿಟ್ಟು ಗೈರು ಹಾಜರಾಗಿದ್ದಕ್ಕಾಗಿ ನಮ್ಮ ಮಕ್ಕಳನ್ನು ಬೈಯ್ಯುವುದಾಗಲೀ ಹೊಡೆಯುವುದಾಗಲೀ ಮಾಡಬೇಡಿ. ನಿಮಗೆ ಗೊತ್ತಿದೆ ಇದು ನಮಗೆ ಇರುವ ಏಕೈಕ ಆದಾಯದ ಮೂಲ. ಅಕ್ಕಿ, ಗೋಧಿ ಬೆಳೆಯುವುದರಿಂದ ನಮಗೆ ಹೆಚ್ಚಿನ ಆದಾಯ ಬರುವುದಿಲ್ಲ. ಹೆಚ್ಚೆಂದರೆ ವರ್ಷಕ್ಕೆ 5 ರಿಂದ 7 ಚೀಲ ಅಕ್ಕಿ ಬೆಳೆಯಬಹುದು. ಹಾಗಾಗಿ....." ಇತ್ಯಾದಿಯಾಗಿ ಶಿಕ್ಷಕರನ್ನು ವಿನಂತಿಸಿಕೊಳ್ಳುತ್ತಾರೆ. ನಾವು ಪೋಷಕರೊಡನೆ ಮೊದಲಿನಿಂದಲೂ ಒಂದು ಸಂಬಂಧವನ್ನು ಬೆಳೆಸಿಕೊಂಡಿರುತ್ತೇವೆ. ಇದು ಒಂದು ರೀತಿ ನಾವೆಲ್ಲಾ ಒಂದೇ ಕುಟುಂಬಕ್ಕೆ ಸೇರಿದ ಸದಸ್ಯರೆಂಬ ಭಾವನೆ ಉಂಟು ಮಾಡಿರುತ್ತದೆ. ನಾವು ಅವರ ನೋವು ನಲಿವುಗಳ ಒಂದು ಭಾಗವಾಗಿರುತ್ತೇವೆ. ಅವರ ರಹಸ್ಯಗಳೆಲ್ಲಾ ನಮ್ಮವಾಗಿರುತ್ತವೆ.

ಇಂದು ನಾನು ಏನನ್ನೂ ಬೋಧಿಸಲಿಲ್ಲ. ನನ್ನ ಮನಸ್ಥಿತಿ ಸರಿಯಿರಲಿಲ್ಲ. ಇಂದು ಮುಂಜಾನೆ ಮನೆಯಿಂದ ಶಾಲೆಗೆ ಹೊರಟಾಗ ದಾರಿಯಲ್ಲಿ ಸಿಮೆಂಟ್ ಅಂಗಡಿ ಮಾಲಿಕನನ್ನು ಭೇಟಿಯಾಗಿದ್ದೆ. ಅಡುಗೆ ಮನೆಯ ದುರಸ್ಥಿಗಾಗಿ ಅವರಲ್ಲಿ ಸಿಮೆಂಟ್ ಮತ್ತು ಕಬ್ಬಿಣವನ್ನು ಖರೀದಿಸಿದ್ದೆ. ಅದಕ್ಕಾಗಿ ಇಂದು ಬಿಲ್ ಕೇಳಿದಾಗ ಕಮೀಷನ್ ಕೇಳಿದ. "ನಾನು ಕೊಟ್ಟಿರುವ ಹಣಕ್ಕೆ ಬಿಲ್ ಕೊಡಿ, ನಕಲಿ ಬಿಲ್ ಅಲ್ಲ" ಎಂದೆ. ಅವನು ಇನ್ನಷ್ಟು ಧೃಡವಾದ ದನಿಯಲ್ಲಿ "ಬಿಲ್ ನೀವು ಕೊಟ್ಟಿರುವ ಹಣಕ್ಕೆ ಆಗಲಿ, ಇನ್ನು ಹೆಚ್ಚಿನ ಅಥವಾ ಕಡಿಮೆ ಮೊತ್ತಕ್ಕೆ ಆಗಲೀ ಶೇ.5 ರಷ್ಟು ಕಮೀಷನ್ ಕೊಡಲೇಬೇಕು" ಎಂದ. ನಾನು ಇತರೆ ದಾಖಲೆಗಳ ಜತೆಗೆ ಖರ್ಚು ಮಾಡಿದ ಹಣಕ್ಕೆ ಸರಿಯಾಗಿ ಬಿಲ್ ಇಡದಿದ್ದರೆ ನನಗೆ ತೊಂದರೆಯಾಗುತ್ತದೆ. ಈಗ ನೀವು ಬಿಲ್ ಕೊಡದಿದ್ದರೆ ಗ್ರಾಹಕರ ವೇದಿಕೆಗೆ ದೂರು ಸಲ್ಲಿಸುವುದಾಗಿ ಹೇಳಿದೆ. ಗ್ರಾಹಕರ ವೇದಿಕೆ ಎಂದು ಹೇಳಿದಾಕ್ಷಣ ಅವನು ಸಿಟ್ಟಿಗೆದ್ದು "ನಿಮ್ಮಿಂದ ಏನಾಗುತ್ತದೋ ಅದನ್ನು ಮಾಡಿಕೊಳ್ಳಿ" ಎಂದನು. ಇನ್ನು ಇವನೊಡನೆ ಹೆಚ್ಚಿಗೆ ವಾದಿಸುವುದು ಸರಿಯಿಲ್ಲವೆಂದುಕೊಂಡು ಶಾಲೆಗೆ ಬಂದುಬಿಟ್ಟೆ. ಶಾಲೆಯಲ್ಲಿ ಆ ಅಂಗಡಿ ಮಾಲೀಕನಿಗೆ ಕೊಡಲು ಶಿಕ್ಷಣ ಸಮಿತಿಯ ಪರವಾಗಿ ಒಂದು ಪತ್ರ ಸಿದ್ಧಗೊಳಿಸಿದೆ. ಮಕ್ಕಳಿಗೆ ಕೊಟ್ಟು ಗ್ರಾಮ ಪ್ರಧಾನರಿಂದ ಸಹಿ ಮಾಡಿಸಿಕೊಂಡು ಬರಲು ಕಳುಹಿಸಿದೆ.

ಅಷ್ಟರಲ್ಲಿ ಶಾಲೆಗೆ ಒಬ್ಬ ಜಂಟಲ್‌ಮ್ಯಾನ್ ಬಂದ. ಅವನು ಪೈನ್ ಮರದ ರಾಳದ ವ್ಯಾಪಾರಿ. ಅವನು ನಮ್ಮ ಮಕ್ಕಳ ಮೇಲೆ ಒಂದು ದೂರು ಕೊಡಲು ಬಂದಿದ್ದ. ನಮ್ಮ ಮಕ್ಕಳು ಮನೆಗೆ ಹೋಗುವಾಗ ಅವರು ಪೈನ್ ಮರಗಳಲ್ಲಿ ಕಟ್ಟಿದ್ದ ರಾಳದ ಮಡಿಕೆಗಳಿಗೆ ಕಲ್ಲು ಹಾಕಿ ಹೊಡೆದು ಹಾಕಿದ್ದರಂತೆ. ಅವನು ಹೇಳಿದ "ಆ ಮಡಿಕೆಗಳಿಂದ ಈ ಮಕ್ಕಳಿಗೆ ಏನು ತೊಂದರೆಯಾಗುತ್ತಿತ್ತು ನೀವೇ ಹೇಳಿ? ದಯಮಾಡಿ ಕಾಡಿನ ಮೂಲಕ ಮನೆಗಳಿಗೆ ಹೋಗುವ ಮಕ್ಕಳನ್ನು ಬೈಯ್ಯಿರಿ ಮತ್ತು ಚೆನ್ನಾಗಿ ಹೊಡೆಯಿರಿ". ಖಂಡಿತವಾಗಿ ನಾನು ಆ ತರಲೆ ಮಕ್ಕಳ ಜತೆ ಇದರ ಬಗ್ಗೆ ಮಾತನಾಡುವುದಾಗಿಯೂ ಅವರಿಗೆ ಅರ್ಥವಾಗುವಂತೆ ಇದರ ಬಗ್ಗೆ ತಿಳಿಸಿ ಹೇಳುವುದಾಗಿಯೂ ಹೇಳಿದೆ. ಇದಾದ ಸ್ವಲ್ಪ ಸಮಯದ ಬಳಿಕ ಅವನು ಹೊರಟು ಹೋದ. ನಂತರ ನಾನು ಮಕ್ಕಳ ಜತೆ ಈ ವಿಷಯದ ಬಗ್ಗೆ ಮಾತನಾಡಿ ಮನವರಿಕೆ ಮಾಡಿಕೊಟ್ಟೆ. ಆದರೆ ಯಾರನ್ನೂ ಹೊಡೆಯುವುದಾಗಲೀ, ಬೈಯ್ಯುವುದಾಗಲೀ ಮಾಡಲಿಲ್ಲ. ನಾನು ನನ್ನ ಬಾಲ್ಯದ ದಿನಗಳನ್ನು ನೆನಪಿಸಿಕೊಂಡು ಮುಗುಳ್ನಕ್ಕೆ.

ನಾನು ಚಿಕ್ಕವನಾಗಿದ್ದಾಗ ನಾನು ಇದೇ ರೀತಿ ಮಾಡುತ್ತಿದ್ದೆ. ನಾವು ದನಕಾಯಲು ಅಥವಾ ದನಗಳಿಗೆ ಹುಲ್ಲು ತರಲು ಹೋದಾಗ ಅಥವಾ ಕಟ್ಟಿಗೆ ತರಲು ಹೋದಾಗ ರಾಳದ ಮಡಿಕೆಗಳನ್ನು ಹೊಡೆದು ಹಾಕುತ್ತಿದ್ದೆವು ಇಲ್ಲ ರಾಳವನ್ನೆಲ್ಲಾ ಚೆಲ್ಲಿ ಹಾಕುತ್ತಿದ್ದೆವು. ಕೆಲವೊಮ್ಮೆ ಕೆಲವು ಮಡಿಕೆಗಳನ್ನು ಮನೆಗೆ ತರುತ್ತಿದ್ದೆವು. ದೀಪಾವಳಿ ಹಬ್ಬದಂದು ಬೀದಿಗಳಲ್ಲಿ ರಾಳದ ಜತೆ ಭತ್ತದ ಹೊಟ್ಟನ್ನು ಬೆರೆಸಿ ದೀಪದಂತೆ ಉರಿಸುತ್ತಿದ್ದೆವು. ನಮ್ಮ ತಾಯಿ ಮತ್ತು ಅಜ್ಜಿ ಹೊಡೆದ ಹಿಮ್ಮಡಿಗಳಿಗೆ ತಾಜಾ ರಾಳವನ್ನು ಹಚ್ಚುತ್ತಿದ್ದರು. ಅಲ್ಲದೆ ಬೆಂಕಿ ಹೊತ್ತಿಸಲೂ ಇದು ಸಹಕಾರಿಯಾಗುತ್ತಿತ್ತು.

ಂ

ಒ ದು ಸಲ ನಾವು ಟಾರ್ ತುಂಬಿದ ಪಿ.ಡಬ್ಲ್ಯು.ಡಿ.ಟ್ರಾಲಿ ಒಂದನ್ನು ಸುಮಾರು 500 ಅಡಿ ಆಳದ ಗುಂಡಿಯೊಂದಕ್ಕೆ ಬೀಳಿಸಿದ್ದೆವು. ಅದು ಈ ರೀತಿ ಆಯಿತು. ಪಿ.ಡಬ್ಲ್ಯು.ಡಿ. ಕಾರ್ಮಿಕರು ರಸ್ತೆಗೆ ಟಾರ್ ಹಾಕುತ್ತಿದ್ದರು. ಕೆಲವರು ಟಾರ್ ತುಂಬಿದ ಟ್ರಾಲಿಯನ್ನು ತಳ್ಳುತ್ತಿದ್ದರು. ನಾವೂ ಸಹ ಅವರೊಡನೆ ತಳ್ಳಲು ಪ್ರಾರಂಭಿಸಿದೆವು. ಆಗ ಏನಾದರೂ ಚೇಷ್ಟೆ ಮಾಡಬೇಕೆಂದು ಕೊಂಡು ರಸ್ತೆ ಬದಿಗೆ ಜೋರಾಗಿ ತಳ್ಳಲು ಆರಂಭಿಸಿದೆವು. ಕೆಲವರೇ ಇದ್ದ ಕಾರ್ಮಿಕರು ಸರಿಯಾದ ದಿಕ್ಕಿಗೆ ತರಲು ಅಸಹಾಯಕರಾಗಿದ್ದರು. ಕೆಲವೇ ಕ್ಷಣಗಳಲ್ಲಿ ನೋಡು ನೋಡುತ್ತಿದ್ದಂತೆ ಟ್ರಾಲಿ ಹಳ್ಳಕ್ಕೆ ಬಿತ್ತು. ನಾವು ಸ್ವಲ್ಪ ಹೊತ್ತು ಅದನ್ನೇ ನೋಡುತ್ತಿದ್ದು ನಂತರ ಶಾಲೆಗೆ ಹೋದೆವು. ಅದರ ಹಿಂದೆಯೇ ಅವರು ಶಾಲೆಗೆ ದೂರು ತಂದರು. ನಾವೆಲ್ಲಾ ಭಯದಿಂದ ನಡುಗುತ್ತಿದ್ದೆವು. ಎದೆ ಢವ ಢವ ಎಂದು ಜೋರಾಗಿ ಹೊಡೆದುಕೊಳ್ಳುತ್ತಿತ್ತು. ಗುರುಗಳು ನಮ್ಮನ್ನು ಹೊಡೆಯುತ್ತಾರೆಂದು ಎಲ್ಲರೂ ಹೆದರಿದ್ದೆವು. ಗುರುಗಳು ನಮ್ಮನ್ನು ಕರೆದು "ಏನು, ನೀವು ಟ್ರಾಲಿಯನ್ನು ಬೀಳಿಸಿದಿರಾ?" ಎಂದು ಕೇಳಿದರು. ನಾವು "ಸರ್, ಅವರು ಟ್ರಾಲಿಯನ್ನು ತಳ್ಳಲು ಕರೆದರು. ನಾವು ತಳ್ಳಿದೆವು. ಇದ್ದಕ್ಕಿದ್ದಂತೆ ಅದು ಇಳಿಜಾರಿನ ಕಡೆ ಚಲಿಸಲು ಪ್ರಾರಂಭಿಸಿತು. ನಮ್ಮಿಂದ ಅದನ್ನು ತಡೆಯಲು ಆಗಲಿಲ್ಲ. ಅದು ಹಾಗೆ ಹೋಗಿ ಹಳ್ಳಕ್ಕೆ ಬಿತ್ತು". ಗುರುಗಳು ಅವರನ್ನು ನೀವು ಇವರನ್ನು ಟ್ರಾಲಿ ತಳ್ಳಲು ಕರೆದಿರಾ? ಎಂದು ಕೇಳಿದರು. ಅವರು ಇಲ್ಲ ಎನ್ನಲಿಲ್ಲ. ಅದಕ್ಕೆ ಗುರುಗಳು ಮಕ್ಕಳನ್ನು ನಿಮ್ಮ ಕೆಲಸ ಮಾಡಲು ಕರೆದಿದ್ದು ನಿಮ್ಮದೇ ತಪ್ಪು ಎಂದು ಹೇಳಿ ಕಳುಹಿಸಿದರು. ನಂತರ ನಮ್ಮನ್ನೂ ಸ್ವಲ್ಪ ಬೈಯ್ದರು. ನಂತರ ತರಗತಿಗಳಿಗೆ ಕಳುಹಿಸಿ ಬಿಟ್ಟರು. ಇದಾದ ಮೇಲೆ ಅದನ್ನು ನೆನಪಿಸಿಕೊಂಡು ಹೊಟ್ಟೆ ತುಂಬಾ ನಕ್ಕೆವು.

ಆ ಜೆಂಟಲ್‌ಮ್ಯಾನ್ ಹೋದ ಬಳಿಕ ಮಕ್ಕಳು ಗ್ರಾಮ ಪ್ರಧಾನರಿಂದ ಸಹಿ ಮಾಡಿಸಿಕೊಂಡು ಹಿಂತಿರುಗಿದರು. ನಾನು ಅದನ್ನು ಒಂದು ಲಕೋಟೆಯಲ್ಲಿಟ್ಟು ರಿಜಿಸ್ಟರ್ಡ್ ಪೋಸ್ಟ್ ಮಾಡಿ ಬರಲು ಮಕ್ಕಳ ಕೈಗೆ ಕೊಟ್ಟು ಕಳುಹಿಸಿದೆ. ಅಡುಗೆಯಾಕೆ ಇಂದೂ ಸಹ ತಡವಾಗಿ ಬಂದಳು. ಹಾಗಾಗಿ ಅಡುಗೆ ಮಾಡಲಿಲ್ಲ.

ನಮ್ಮ ಶಾಲೆಯ ಸಮೀಪ ಒಂದು ಶವ ಸಂಸ್ಕಾರ ನಡೆಯುತ್ತಿತ್ತು. ಊರಿನ ಒಬ್ಬ ಯುವತಿ ತೀರಿಕೊಂಡಿದ್ದಾಳೆಂದು ತಿಳಿಯಿತು. ಊಟದ ವೇಳೆಯಾಯಿತು. ಆ ಸಮಯದಲ್ಲಿ ನಾವೆಲ್ಲಾ ಎರಡು ನಿಮಿಷ ಆ ಯುವತಿಯ ಆತ್ಮಕ್ಕೆ ಶಾಂತಿ ಕೋರಿ ಮೌನಾಚರಣೆ ಮಾಡಿದೆವು. ಊಟದ ವಿರಾಮದ ನಂತರ ಶಾಲೆಗೆ ರಜೆ ನೀಡಲಾಯಿತು. ನಾಳೆಯಿಂದ ಅಂದರೆ 7ರಿಂದ 9ರವರೆಗೆ ನಾನು ರಜೆ ಮೇಲೆ ಹೋಗುವವನಿದ್ದೆ. ಆದ್ದರಿಂದ ವಿಮಲಾಗೆ ಶಾಲೆಯ ಚಾರ್ಜನ್ನು ಒಪ್ಪಿಸಿದೆ.

ಇಂದು ಶಾಲೆ ತೆರೆಯುತ್ತಿದ್ದಂತೆಯೇ ಪೋಷಕರೂ, ನಮ್ಮ ಶಾಲೆಯ ಶಿಕ್ಷಣ ಸಮಿತಿಯ ಸದಸ್ಯರೂ ಆದ ಶಿವದತ್ತಜೀರವರು ಬಂದರು. ಅವರು ಮೇಸ್ತ್ರಿ ಕೆಲಸ ಮಾಡುತ್ತಿದ್ದರು. ಅವರಿಗೆ ಅಡುಗೆ ಮನೆಯ ದುರಸ್ತಿ ಮಾಡುವ ಮತ್ತು ಅದಕ್ಕೆ ಮೇಲ್ಛಾವಣಿ ಹಾಕುವ ಕೆಲಸ ಒಪ್ಪಿಸಿದ್ದೆವು. ಇದಕ್ಕಾಗಿ ಪ್ರಸಕ್ತ ವರ್ಷ ನಮ್ಮ ಶಾಲೆಗೆ ಬಿಡುಗಡೆಯಾಗಿದ್ದ ಅನುದಾನದಲ್ಲಿ 5000 ರೂ.ಗಳನ್ನು ಬಳಸುವವರಿದ್ದೆವು.



ಶೀವದತ್ತಜೀರವರು ಮೊದಲೇ ಇಟ್ಟಿಗೆಗಳನ್ನು ತಯಾರಿಸಿಟ್ಟುಕೊಂಡಿದ್ದರು. ಇಂದು ಅವರಿಗೆ ಕೆಲಸವನ್ನು ವಿವರಿಸಿ ಹೇಳಿದೆ– ಮೇಲ್ಛಾವಣಿ ಎಷ್ಟು ಎತ್ತರದಲ್ಲಿರಬೇಕು, ಗವಾಕ್ಷಿ ಎಲ್ಲಿರಬೇಕು, ಯಾವ ಕಡೆಗೆ ಇಳಿಜಾರಿರಬೇಕು ಮತ್ತು ಕಪಾಟು ಎಲ್ಲಿರಬೇಕು ಇತ್ಯಾದಿ.

ಶಿವದತ್ತಜೀರವರು ಒಬ್ಬ ಹಿರಿಯ ವೃದ್ಧ ಸಭ್ಯ ವ್ಯಕ್ತಿ. ಅವರಿಗೆ ಸುಮಾರು 70ವರ್ಷ ವಯಸ್ಸಾಗಿರಬಹುದು ಆದರೆ ಆವರ ಉತ್ಸಾಹ ಮತ್ತು ಚೈತನ್ಯ ಯುವಕರನ್ನೂ ನಾಚಿಸುವಂತಹುದು. ಕೆಲಸವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳುತ್ತಾರೆ. ಅವರು ನಮ್ಮ ಶಿಕ್ಷಣ ಸಮಿತಿಯ ಸದಸ್ಯರೂ ಹೌದು. ಅವರ ಮೂವರು ಮಕ್ಕಳು ನಮ್ಮ ಶಾಲೆಯಲ್ಲಿ ಓದುತ್ತಿದ್ದಾರೆ. ಎರಡು ಗಂಡು ಮತ್ತು ಒಂದು ಹೆಣ್ಣು ಮಗು. ಅವರು 58ನೇ ವಯಸ್ಸಿನಲ್ಲಿ ಪುನಃ ಮದುವೆಯಾದರು. ಎರಡನೆಯ ಹೆಂಡತಿಗೆ 34–35ಕ್ಕೆ ಹೆಚ್ಚಿರಲಾರದು. ಮೊದಲನೆಯ ಹೆಂಡತಿ ಅವರಿಗೆ ಕೇವಲ 3–4 ಹೆಣ್ಣು ಮಕ್ಕಳನ್ನು ಕೊಟ್ಟಿದ್ದಾಳೆ.

ನಾನು ಕೆಲವೊಮ್ಮೆ ಕೆಲಸದ ಮೇಲ್ವಿಚಾರಣೆ ಮಾಡುತ್ತೇನೆ ಮತ್ತು ಅವರೊಡನೆ ಸ್ವಲ್ಪ ಹೊತ್ತು ಹರಟೆ ಹೊಡೆಯುತ್ತೇನೆ.ಅವರ ಜೀವನದಲ್ಲಿ ಅವರು ಏನೆಲ್ಲಾ ಕಷ್ಟ ಪಟ್ಟರು ಮತ್ತು ಅವರಿಗಿರುವ ಬಡತನದ ಕುರಿತು ಮಾತನಾಡುವಾಗ ಕೆಲವೊಮ್ಮೆ ಗದ್ಗದಿತರಾಗುತ್ತಾರೆ. ಅವರು ಹೇಳುತ್ತಾರೆ "ಗುರೂಜಿ, ಮೊದಲನೆಯ ಹೆಂಡತಿಯಿಂದ ನನಗೆ ಗಂಡು ಮಕ್ಕಳಾಗದಿದ್ದಾಗ ನಾನು ತುಂಬಾ ಖಿನ್ನನಾಗಿದ್ದೆ ಮತ್ತು ನಿರಾಸೆಗೊಳಗಾಗಿದ್ದೆ. ಆಗ ನನ್ನ ಸ್ನೇಹಿತರು ಮತ್ತು ಶ್ರೇಯೋಭಿಲಾಷಿಗಳ ಸಲಹೆ ನೀಡಿದ್ದರಿಂದ 58ನೇ ವಯಸ್ಸಿನಲ್ಲಿ ಎರಡನೆಯ ಮದುವೆಯಾದೆ. ಈಗ ತುಂಬಾ ಖುಷಿಯಾಗಿದ್ದೇನೆ. ಇನ್ನು ನನ್ನ ಮಕ್ಕಳಿಗಾಗಿ ದುಡಿಯಬೇಕಷ್ಟೆ ಅದನ್ನು ಸಂತೋಷವಾಗಿ ಮಾಡುತ್ತೇನೆ". ಶಿವದತ್ತಜೀಯವರು ಕೆಲವು ಕುತೂಹಲಕಾರಿ ಕಥೆಗಳನ್ನು ಹೇಳುತ್ತಾರೆ. ನನಗೆ ಅವು ತುಂಬಾ ರೋಚಕವೆನಿಸುತ್ತವೆ. ಅದಕ್ಕೆ ಹಲವಾರು ಸಲ ಅವುಗಳನ್ನೆಲ್ಲಾ ಒಂದುಗೂಡಿಸಿ 'ಶಿವದತ್ತಜೀ ಕಥೆಗಳು' ಎಂಬ ಪುಸ್ತಕ ಬರೆಯಬೇಕೆಂದುಕೊಳ್ಳುತ್ತೇನೆ.

ಮನೆಗೆ ಹೋಗುವಾಗ ದಾರಿಮಧ್ಯೆ ಮಾತ್ವರ್‌ಲಾಲ್‌ರವರನ್ನು ಭೇಟಿಯಾದೆ. ಉಪವಿಭಾಗೀಯ ಶಿಕ್ಷಣಾಧಿಕಾರಿಗಳ ಕಛೇರಿಗೆ ಜತೆಗೆ ಬರುವಂತೆ ವಿನಂತಿಸಿಕೊಂಡರು. ಅವರ ಮಗಳು 8ನೇ ತರಗತಿವರೆಗೆ ಓದಿದ್ದಾಳೆ. ನಂತರ ಮದುವೆಯಾಗಿದ್ದರಿಂದ ಶಿಕ್ಷಣ ಮುಂದುವರೆಸಿಲ್ಲ. ಹಾಗಾಗಿ ಟಿ.ಸಿ. ಪಡೆದುಕೊಂಡಿಲ್ಲ.

ಇತ್ತೀಚೆಗೆ ಅವರ ಊರಲ್ಲಿ ಅಂಗನವಾಡಿ ಕಾರ್ಯಕರ್ತೆಯರ ಹುದ್ದೆಗೆ ಅರ್ಜಿ ಆಹ್ವಾನಿಸಿದ್ದಾರೆ. ಅದಕ್ಕೆ ಅವಳು ಅರ್ಜಿ ಸಲ್ಲಿಸಬೇಕೆಂದಿದ್ದಾಳೆ. ಆದರೆ ವಯಸ್ಸು 6 ತಿಂಗಳು ಹೆಚ್ಚಾಗಿದೆ. ಈಗ ಶಾಲಾ ದಾಖಲೆಗಳಲ್ಲಿ ವಯಸ್ಸನ್ನು ಕಡಿಮೆಗೊಳಿಸಬೇಕಾಗಿದೆ. ಅವರು ಪರಿಶಿಷ್ಟ ಜಾತಿಗೆ ಸೇರಿದವರಾಗಿದ್ದಾರೆ. ಮೀಸಲಾತಿ ಸಿಗುವುದರಿಂದ ಉದ್ಯೋಗಕ್ಕೆ ಆಯ್ಕೆಯಾಗುವ ಉತ್ತಮ ಅವಕಾಶವಿದೆ.

ನಾನು ಅವರೊಡನೆ ಉಪವಿಭಾಗೀಯ ಶಿಕ್ಷಣಾಧಿಕಾರಿಗಳ ಕಛೇರಿಗೆ ಹೋದೆ. ಅಧಿಕಾರಿಗಳನ್ನು ವಿನಂತಿಸಿಕೊಂಡೆ. ಅವರು ನನ್ನ ವಿನಂತಿಯನ್ನು ಒಪ್ಪಿ ಶಾಲೆಯ ಮುಖ್ಯ ಗುರುಗಳಿಗೆ ಜನ್ಮ ದಿನಾಂಕವನ್ನು ತಿದ್ದುಪಡಿ ಮಾಡುವಂತೆ ಆದೇಶಿಸಿ ಒಂದು ದೃಢೀಕರಣ ಪತ್ರ ನೀಡಿದರು.

ಕಛೇರಿಯಿಂದ ಹಿಂತಿರುಗುವಾಗ ಡುಂಡಕ್ಕೆ ಹೋದೆ. ಅಲ್ಲಿ ಕೆಲವು ಟಿಬೆಟಿಯನ್ಸ್ ವಾಸಿಸುತ್ತಾರೆ. ಆ ಬೌದ್ಧ ಮಠದಲ್ಲಿ ಲಾಮಾರನ್ನು ಭೇಟಿಯಾಗಬೇಕೆಂದು ಹೋಗಿದ್ದೆ ಆದರೆ ಭೇಟಿ ಮಾಡಲಾಗಲಿಲ್ಲ. ರಾತ್ರಿ ಬ್ರಹ್ಮಕುಮಾರಿ ಆಶ್ರಮದಲ್ಲಿ ಉಳಿದುಕೊಂಡಿದ್ದೆ. ಅಲ್ಲಿ ಧ್ಯಾನ ಮತ್ತು ಪ್ರವಚನ ಮುಂತಾದ ಆಶ್ರಮದ ಚಟುವಟಿಕೆಗಳಲ್ಲಿ ಭಾಗವಹಿಸಿದ್ದೆ. ಆಶ್ರಮದವರು ತಮ್ಮ ವಾರ್ಷಿಕ ಆಚರಣೆಯ ನಿಮಿತ್ತ ಅಂತರ್ ಶಾಲಾ ಸ್ಪರ್ಧೆಗಳನ್ನು ಆಯೋಜಿಸಿದ್ದರು. ಅದಕ್ಕೆ ಬೇಕಾದ ಅಗತ್ಯ ಕಾಗದ ಪತ್ರಗಳನ್ನು ಸಿದ್ಧಗೊಳಿಸಿದೆ. ಕಾರ್ಯಕ್ರಮವನ್ನು ಆಯೋಜಿಸಲು ಒಂದು ಕ್ರಿಯಾ ಯೋಜನೆ ತಯಾರಿಸಿದೆ. ತಡ ರಾತ್ರಿಯವರೆಗೂ ಈ ಕೆಲಸದಲ್ಲಿ ತೊಡಗಿದ್ದೆ. ಕಾರ್ಯಕ್ರಮದ ಆಯೋಜನೆಗೆ ಸಹಾಯ ಮಾಡಲು ಆಶ್ರಮದವರು ನನ್ನನ್ನು ಆಹ್ವಾನಿಸಿದ್ದರು. ಸ್ವಲ್ಪ ಹೊತ್ತು ಇಂಟರ್‌ನೆಟ್ ಬ್ರೌಸ್ ಮಾಡಿ 11–30ಕ್ಕೆ ಮಲಗಿದೆ.

## ಹಿಂಬಿಡಲಾರದೆ.......

ಹೀಗೆ ಕೆಲವರು,
ಅಹಂಗಳನ್ನು ಹಿಂಬಿಡಲಾರದೆ,
ಕೊನೆ ಮುಟ್ಟಿದ್ದು,
ಬೊಗಸೆ ಪ್ರೀತಿಯೂ ಇಲ್ಲದಲ್ಲಿ.

ಹೀಗೆ ಕೆಲವರು,
ಹಿಡಿದ ಕೊಂಬೆಯನ್ನು ಹಿಂಬಿಡಲಾರದೆ,
ಕೊನೆ ಮುಟ್ಟಿದ್ದು,
ಸ್ವಚ್ಛಂದ ಹಾರಾಟವನ್ನು ಮರೆಯುವಲ್ಲಿ.

ಹೀಗೆ ಕೆಲವರು,
ಬೇಸರ ಮತ್ತು ದ್ವಂದ್ವಗಳನ್ನು ಹಿಂಬಿಡಲಾರದೆ,
ಕೊನೆ ಮುಟ್ಟಿದ್ದು,
ಜೀವಮಾನದ ನಂಬಿಕೆಗಳನ್ನೇ ಹೂತಲ್ಲಿ.

ಹೀಗೆ ಕೆಲವರು,
ಅನುಮಾನಗಳನ್ನು ಹಿಂಬಿಡಲಾರದೆ,
ಕೊನೆ ಮುಟ್ಟಿದ್ದು,
ಬದುಕ ತುಂಬುವ ಶಾಂತಿ-ನೆಮ್ಮದಿಗಳು ಉಸಿರಾಡದಲ್ಲಿ.



### 7,8,9-ಸೆಪ್ಟೆಂಬರ್-2007

ಸೆಪ್ಟೆಂಬರ್ 7 ರಿಂದ 9 ರವರೆಗೆ ಉತ್ತರಕಾಶಿಯಲ್ಲಿದ್ದೆ. ನಾನು ಕಾರ್ಯಕ್ರಮವನ್ನು ಆಯೋಜಿಸಲು ಸಂಸ್ಥೆಯ ಸದಸ್ಯರಿಗೆ ಸಹಾಯ ಮಾಡಿದೆ. ಮಕ್ಕಳ ಸ್ಪರ್ಧೆಗಳನ್ನು ಸರ್ಕಾರಿ ಸ್ನಾತಕೋತ್ತರ ಕಾಲೇಜ್‌ನಲ್ಲಿ ಆಯೋಜಿಸಿದ್ದರು. ನಾನು ಬ್ರಹ್ಮಕುಮಾರಿ ಸಂಸ್ಥೆಯ ಸದಸ್ಯರೊಂದಿಗೆ ಕೆಲಸ ಮಾಡಿದೆ. 11 ಶಾಲೆಗಳಿಂದ ಬಂದಿದ್ದ ಸುಮಾರು 150 ಮಕ್ಕಳಿಗೆ ಕಾಲೇಜಿನ ಸಭಾಂಗಣದಲ್ಲಿ ವಿವಿಧ ಸ್ಪರ್ಧೆಗಳನ್ನು ಆಯೋಜಿಸಲಾಗಿತ್ತು. ಜೂನಿಯರ್ ವಿಭಾಗ (6 ರಿಂದ 8 ವರ್ಗ) ಮತ್ತು ಸೆಕೆಂಡರಿ ವಿಭಾಗ (11 ಮತ್ತು 12 ವರ್ಗ) ಗಳಿಂದ ಬಂದಿದ್ದ ಮಕ್ಕಳು ತುಂಬಾ ಉತ್ಸಾಹದಿಂದ ಎಲ್ಲಾ ಸ್ಪರ್ಧೆಗಳಲ್ಲಿ ಪಾಲ್ಗೊಂಡಿದ್ದರು. ಪ್ರಶ್ನೋತ್ತರ ಸ್ಪರ್ಧೆ, ರಸಪ್ರಶ್ನೆ, ಸ್ವರಚಿತ ಕವನ, ಭಿತ್ತಿ ಪತ್ರ ತಯಾರಿಸುವುದು, ಚಿತ್ರಕಲೆ, ಭಾಷಣ ಮಾಡುವುದು, ಪ್ರಬಂಧ ರಚನೆ, ಗಾಯನ ಸ್ಪರ್ಧೆ ಮತ್ತು ಜನಪದ ನೃತ್ಯದಂತಹ ಸ್ಪರ್ಧೆಗಳನ್ನು ಆಯೋಜಿಸಲಾಗಿತ್ತು. ಮೂರು ಸರ್ಕಾರಿ ಶಾಲೆಗಳು, ಸರ್ಕಾರಿ ಇಂಟರ್ ಕಾಲೇಜು, ಉತ್ತರಕಾಶಿ, ಸರ್ಕಾರಿ ಇಂಟರ್ ಕಾಲೇಜು, ಜೋಶಿಯಾಡ ಸರ್ಕಾರಿ ಬಾಲಕಿಯರ ಇಂಟರ್ ಕಾಲೇಜು, ಉತ್ತರಕಾಶಿ ಹಾಗೂ 8 ಖಾಸಗಿ ಶಾಲೆಗಳ ಮಕ್ಕಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಈ ಖಾಸಗಿ ಶಾಲೆಗಳು ನಗರದಲ್ಲಿ ಪ್ರತಿಷ್ಠಿತ ಶಾಲೆಗಳು. ಮಕ್ಕಳು ಇಲ್ಲಿ ಪರೀಕ್ಷೆಯ ಮೂಲಕ ಪ್ರವೇಶ ಪಡೆಯುತ್ತಾರೆ. ಸಾಮಾನ್ಯವಾಗಿ ಶ್ರೀಮಂತರ ಮಕ್ಕಳೇ ಇಲ್ಲಿ ಸೇರುತ್ತಾರೆ. ಆಹ್ವಾನ ಪತ್ರಿಕೆ ಕಳುಹಿಸಿದ್ದರೂ ಒಂದೂ ಸರ್ಕಾರಿ ಪ್ರೌಢಶಾಲೆ ಇದರಲ್ಲಿ ಭಾಗವಹಿಸಿರಲಿಲ್ಲ. ಸರ್ಕಾರಿ ಶಾಲೆಯ ಶಿಕ್ಷಕರಲ್ಲಿ ಸರ್ಕಾರಿ ಶಾಲೆಗಳ ಮಕ್ಕಳಿಗಿಂತ ಖಾಸಗಿ ಶಾಲೆಗಳ ಮಕ್ಕಳು ತುಂಬಾ ಉತ್ತಮ ಪ್ರದರ್ಶನ ನೀಡುತ್ತಾರೆಂಬ ಒಂದು ಭಯ ಆವರಿಸಿದೆ. ಅಲ್ಲದೆ ಸರ್ಕಾರಿ ಶಾಲೆಗಳ ಬಡ ಮಕ್ಕಳು ಸರಿಯಾಗಿ ಕಲಿಯುವುದಿಲ್ಲ ಎಂಬ ಭಾವನೆಯೂ ಸರ್ಕಾರಿ ಶಾಲೆಗಳ ಶಿಕ್ಷಕರಲ್ಲಿದೆ. ಇವರ ಮನೆಯ ಪರಿಸ್ಥಿತಿ ಖಾಸಗಿ ಶಾಲೆಗಳ ಮಕ್ಕಳ ಪರಿಸ್ಥಿತಿಗಿಂತ ಭಿನ್ನವಾಗಿರುತ್ತದೆ ಎಂಬುದು ಅವರ ನಂಬಿಕೆ. ಆದರೆ ಸತ್ಯವೇನೆಂದರೆ ನಾವು-ಸರ್ಕಾರಿ ಶಾಲೆಯ ಶಿಕ್ಷಕರು ಇಂತಹ ಸಹಪಠ್ಯ ಚಟುವಟಿಕೆಗಳನ್ನು ಆಯೋಜಿಸಲು ಹೆಚ್ಚಿನ ಸಮಯ ಮತ್ತು ಶ್ರಮ ಹಾಕುವುದಿಲ್ಲ.

ಭಿತ್ತಿ ಪತ್ರ ತಯಾರಿಸುವುದು, ಗಾಯನ ಸ್ಪರ್ಧೆ, ನೃತ್ಯ ಮುಂತಾದ ಸ್ಪರ್ಧೆಗಳಲ್ಲಿ ಮಕ್ಕಳ ಸಹಜ ಪ್ರತಿಭೆಯನ್ನು ವೀಕ್ಷಿಸಲು ನಮಗೆ ಅವಕಾಶ ದೊರೆಯಿತು. ಆದರೆ ಭಾಷಣ, ಪ್ರಬಂಧ ಸ್ಪರ್ಧೆ, ಸ್ವರಚಿತ ಕವನ ವಾಚನ ಮುಂತಾದುವುಗಳಲ್ಲಿ ಹಿರಿಯರ ನೆರಳು ಸ್ಪಷ್ಟವಾಗಿ ಕಾಣುತ್ತಿತ್ತು. ಭಾಷಣ ಸ್ಪರ್ಧೆಯಲ್ಲಿ ಕಂಠಪಾಠ ಮಾಡಿದ ಭಾಷಣ ಕೃತ್ರಿಮವಾಗಿ ಕಾಣುತ್ತಿತ್ತು. ಮಧ್ಯದಲ್ಲಿ ಒಂದು ಸಾಲು ಮರೆತು ಹೋದರೆ ಮುಂದಿನ ಭಾಷಣದ ಕೊಂಡಿ ಮುರಿದು ಹೋಗಿ ಇಡೀ ಭಾಷಣ ಮರೆತು ಹೋಗುತ್ತಿತ್ತು. ಸ್ವರಚಿತ ಕವನ ವಾಚನದಲ್ಲೂ ಇದೇ ರೀತಿ ಆಗುತ್ತಿತ್ತು. ಭಾಷಣದ ಭಾಷೆ, ವಾಕ್ಯ ಮತ್ತು ಕೆಲವೊಮ್ಮೆ ಇಡೀ ಭಾವದಿಂದ ಇದು ಮಗು ಬರೆದಿದ್ದಲ್ಲ ಎಂಬುದು ಸ್ಪಷ್ಟವಾಗಿ ತಿಳಿಯುತ್ತಿತ್ತು. ಭಾಷಣಗಳು ಕೆಲವೊಮ್ಮೆ ಕೇಳುಗರಿಗೂ ಅರ್ಥವಾಗದಷ್ಟು ಕಠಿಣ ಪದಗಳನ್ನು ಒಳಗೊಂಡಿದ್ದವು. ಪೋಷಕರು ಆದಷ್ಟು ಅವುಗಳನ್ನು ಜಟಿಲ, ಸಂಕೀರ್ಣ ಮತ್ತು ಬೌದ್ಧಿಕವಾಗಿ ಕ್ಲಿಷ್ಟವಾಗಿಸಿದ್ದರು. ಇದರಿಂದ ತಮ್ಮ ಮಕ್ಕಳ ಸಾಮಾನ್ಯ ಜ್ಞಾನ ಹೆಚ್ಚಾಗಿರುವಂತೆ ಕಾಣುವುದಲ್ಲದೆ ಬುದ್ಧಿವಂತರೆನಿಸಿಕೊಳ್ಳುತ್ತಾರೆಂಬುದು ಅವರ ನಂಬಿಕೆ. ಇನ್ನೊಂದು ಕಡೆ ಬೇರೆಯವರು ಬರೆದುದನ್ನು ಕಂಠಪಾಠ ಮಾಡಿ ಹೇಳುವಾಗ ಅವರ ಮುಖದಲ್ಲಿ ಒಂದು ವಿಧದ ಟೆನ್ಷನ್‌ನ್ನು ಸ್ಪಷ್ಟವಾಗಿ ಕಾಣಬಹುದು.

ಕವನ ರಚನೆಯಲ್ಲೂ ಇದೇ ರೀತಿ ಆಗುತ್ತಿತ್ತು. ರಸಪ್ರಶ್ನೆ ಸ್ಪರ್ಧೆಯಂತೂ ಕಂಠಪಾಠ ಮಾಡುವುದಕ್ಕೆ ಜೀವಂತ ಉದಾಹರಣೆ. ಒಂದು ವಿಷಯವನ್ನು ಉರು ಹೊಡೆದು ಕಲಿಯುವುದರಿಂದ ಮತ್ತು ಅದನ್ನು ಯಥಾವತ್ತಾಗಿ ಪುನರುಚ್ಚರಿಸುವುದರಿಂದ ಏನು ಪ್ರಯೋಜನ? ಇಂತಹ ಚಟುವಟಿಕೆಗಳಿಂದ ನಾವು ಏನನ್ನು ಬೆಳೆಸಲು ಪ್ರಯತ್ನಿಸುತ್ತಿದ್ದೇವೆ? ಈ ರೀತಿ ಮುಂಚಿತವಾಗಿ ಚಟುವಟಿಕೆ ತಿಳಿಸಿ ಪೂರ್ವ ತಯಾರಿ ಮಾಡಿಸುವ ಬದಲು, ಅವರಿಗೆ ಆಸಕ್ತಿಯಿರುವ ಚಟುವಟಿಕೆಯನ್ನು ಸ್ಪರ್ಧೆ ನಡೆಯುವ ಸ್ಥಳದಲ್ಲೇ ಕೊಡಬೇಕು. ಆ ಚಟುವಟಿಕೆಗೆ ಸಂಬಂಧಿಸಿದ ವಿಷಯವನ್ನು ಸ್ಪರ್ಧೆಗೆ ಅರ್ಧ ಗಂಟೆಯಿಂದ ಒಂದು ಗಂಟೆಗೆ ಮುಂಚೆ ತಿಳಿಸಬೇಕು. ಇದರಿಂದ ಮಕ್ಕಳು ಅದರ ಬಗ್ಗೆ ಚಿಂತನೆ ಮಾಡಲು ಸ್ವಲ್ಪ ಸಮಯ ದೊರೆತಂತಾಗುತ್ತದೆ. ಭಾಷಣ ಮತ್ತು ಪ್ರಬಂಧ ಎರಡಕ್ಕೂ ಹೀಗೆ ಮಾಡಬಹುದು. ಇದರಿಂದ ಆಲೋಚಿಸಿ ಮಾತನಾಡುವ ಮತ್ತು ಆಲೋಚಿಸಿ ಬರೆಯುವ ಕೌಶಲ ಬೆಳೆಸಬಹುದು. ಜತೆಗೆ ಇದರಿಂದ ಮಕ್ಕಳ ಮೌಲಿಕ ಚಿಂತನೆ, ಅವರ ಪೂರ್ವ ಅಧ್ಯಯನ ಮತ್ತು ವಿಷಯ ಪರಿಣತಿಗಳಲ್ಲಿ ಅವರ ಪ್ರಭುತ್ವವನ್ನು ಅರಿತುಕೊಳ್ಳಲು ಸಹಕಾರಿಯಾಗುತ್ತದೆ.

ಆದರೆ ಸಂಗೀತ, ಗಾಯನ, ನೃತ್ಯ ಮತ್ತು ಚಿತ್ರಕಲೆಗಳಲ್ಲಿ ಮಕ್ಕಳು ತುಂಬಾ ಸ್ವತಂತ್ರವಾಗಿ ತಮ್ಮ ಪ್ರತಿಭೆಯನ್ನು ಪ್ರದರ್ಶಿಸುತ್ತಾರೆ. ಏಕೆಂದರೆ ಈ ಸ್ಪರ್ಧೆಗಳಲ್ಲಿ ತಮ್ಮ ಪ್ರತಿಭೆಯನ್ನು ಅಭಿವ್ಯಕ್ತಿಗೊಳಿಸಲು ಮುಕ್ತ ಅವಕಾಶವಿದೆ.

ಚಿತ್ರಕಲೆಯಲ್ಲಂತೂ ಮಕ್ಕಳು ತಮ್ಮ ಕಲ್ಪನೆಗಳಿಗೆ ಆಕಾರ ನೀಡುವುದರಲ್ಲಿ ಸಂಪೂರ್ಣವಾಗಿ ತಲ್ಲೀನರಾಗಿವುದನ್ನು ನೋಡಿದೆ. ಕೇವಲ ಕಾಗದದ ಮೇಲೆ ವ್ಯಕ್ತಗೊಳಿಸಿದ ಮೂರ್ತ ಕಲ್ಪನೆಗೆ ಪ್ರಥಮ, ದ್ವಿತೀಯ ಮತ್ತು ತೃತೀಯ ಎಂದು ಬಹುಮಾನ ಕೊಡುವುದು ಅರ್ಥಹೀನವೆನಿಸುತ್ತದೆ. ಒಂದೇ ವಿಷಯವನ್ನು ಪ್ರತಿ ಮಗು ಬೇರೆ ಬೇರೆ ವಿಧದಲ್ಲಿ ಚಿತ್ರ ರಚಿಸುತ್ತದೆ.

ನಾನು ನೋಡಿದ ಹಾಗೆ "ನನ್ನ ಕನಸಿನ ಭಾರತ" ಎಂಬ ವಿಷಯದ ಬಗ್ಗೆ ಒಂದು ಮಗು ಅನೇಕ ವೈಜ್ಞಾನಿಕ ಸಂಶೋಧನೆ ಮತ್ತು ಇತರೆ ಭೌತಿಕ ಸೌಲಭ್ಯಗಳನ್ನು ಚಿತ್ರಿಸುತ್ತದೆ. ಇನ್ನೊಂದು ಮಗು ಭಾರತದ ಪ್ರಾಕೃತಿಕ ಸಂಪನ್ಮೂಲಗಳ ಸಿರಿವಂತಿಕೆಯನ್ನೂ, ಹರಿಯುವ ನದಿಗಳನ್ನೂ, ಹಸಿರು ಬನಗಳನ್ನೂ, ಹಾರುತ್ತಿರುವ ಚಿಟ್ಟೆಗಳನ್ನೂ, ಉದ್ಯಾನಗಳಲ್ಲಿ ಆಡುತ್ತಿರುವ ಮಕ್ಕಳನ್ನೂ, ಮೈದಾನದಲ್ಲಿ ಮೇಯುತ್ತಿರುವ ದನಗಳನ್ನು, ಮರಗಳಲ್ಲಿ ಕುಳಿತ ಹಕ್ಕಿಗಳನ್ನೂ ಚಿತ್ರಿಸುತ್ತದೆ. ಮತ್ತೊಂದು ಮಗು ಸುಂದರವಾದ ಹಳ್ಳಿಯನ್ನೂ, ಅರಳೀಕಟ್ಟೆಯಲ್ಲಿ ಕುಳಿತು ಮಾತನಾಡಿಕೊಳ್ಳುತ್ತಿರುವ ಹಿರಿಯರನ್ನೂ, ಪರಸ್ಪರ ಕುಶಲೋಪರಿಯಲ್ಲಿ ತೊಡಗಿರುವ ಹಳ್ಳಿ ಹೆಣ್ಣು ಮಕ್ಕಳನ್ನೂ, ಜಾತ್ರೆಯನ್ನು ಆಚರಿಸುತ್ತಿರುವ ಹಳ್ಳಿ ಜನರನ್ನೂ, ಕೈ ಹಿಡಿದು ಪಾಟಿಚೀಲವನ್ನು ಹೆಗಲಿಗೆ ಹಾಕಿಕೊಂಡು ಶಾಲೆಗೆ ಹೊರಟಿರುವ ಮಕ್ಕಳನ್ನೂ ಚಿತ್ರಿಸುತ್ತದೆ. ಈ ಚಿತ್ರಗಳಿಗೆ ಯಾವ ಆಧಾರದ ಮೇಲೆ ಪ್ರಥಮ, ದ್ವಿತೀಯ ಎಂದು ರ್‍ಯಾಂಕ್ ಕೊಡುತ್ತೀರಿ? ಏನು ಕೇವಲ ಬಣ್ಣಗಳ ಸಂಯೋಜನೆಗೆ, ಚಿತ್ರದ ಸ್ಪಷ್ಟತೆಗೆ ಅಥವಾ ಮತ್ತಾವುದಕ್ಕೆ? ತಮ್ಮ ಕಲ್ಪನೆಯನ್ನು ಮೂರ್ತ ರೂಪಕ್ಕೆ ತರುವಲ್ಲಿ ಪ್ರತಿಯೊಂದು ಮಗುವೂ ಯಶಸ್ವಿಯಾಗಿದೆ. ಆದರೆ ಪ್ರತೀ ಶಾಲೆಯಲ್ಲಿ, ಪ್ರತಿ ಸ್ಪರ್ಧೆಯಲ್ಲಿ ಚಿತ್ರಗಳನ್ನಲ್ಲ ಅವರ ಭಾವನೆಗಳನ್ನು ಅಳೆಯುತ್ತಾರೆ. ಇಂತಹ ಸ್ಪರ್ಧೆಗಳು ಒಂದು ರೀತಿ ಹಾಸ್ಯಾಸ್ಪದವಾಗಿರುವುದಲ್ಲದೆ, ಮಕ್ಕಳ ಭಾವನೆಗಳೊಡನೆ ಆಟವಾಡುತ್ತವೆ ಮತ್ತು ಅವರಿಗೆ ಅನ್ಯಾಯ ಮಾಡುತ್ತವೆ.

ಎಲ್ಲಾ ಮಕ್ಕಳನ್ನೂ ಸಮಾನವಾಗಿ ಪುರಸ್ಕರಿಸಲು ಸಾಧ್ಯವಿದೆಯೇ? ಇದನ್ನು ಅರ್ಥ ಮಾಡಿಕೊಳ್ಳಲು ಖಾಸಗಿ ಶಾಲೆಯ ಶಿಕ್ಷಕರಿಗೆ, ಆಡಳಿತ ಮಂಡಳಿಗೆ ಮತ್ತು ಶಿಕ್ಷಣಾಧಿಕಾರಿಗಳಿಗೆ ಸ್ವಲ್ಪ ಸಮಯ ಬೇಕಾಗುತ್ತದೆ. ಪ್ರಸ್ತುತ ಮಕ್ಕಳು ಶಿಕ್ಷಕರ ಮತ್ತು ಪೋಷಕರ ಆಕಾಂಕ್ಷೆ ಮತ್ತು ಅಹಂಗಳನ್ನು ಈಡೇರಿಸುವ ಸಾಧನಗಳಾಗಿದ್ದಾರೆ.

### 10–ಸೆಪ್ಟೆಂಬರ್–2007

ಇಂದು 9 ಗಂಟೆಗೆ ಧೌಂತರಿ ತಲುಪಿದೆ. ಬಿ.ಆರ್.ಸಿ. ಗೆ ಹೋದೆ. ಸಿ.ಆರ್.ಸಿ. ಸಮನ್ವಯಾಧಿಕಾರಿಗಳಾದ ಶ್ರೀ ಬಿಷ್ಟ್ ರವರು 9 ಗಂಟೆಗಾಗಲೇ ಬಂದಿದ್ದರು. 10 ಗಂಟೆಯಿಂದ 12 ಗಂಟೆಯವರೆಗೆ ಎಂದಿನಂತೆ ನೀರಸ ಸಭೆ ನಡೆಯಿತು. ಶಿಕ್ಷಕರು ಬರುತ್ತಿದ್ದರು, ತಮಗೆ ಬೇಕಾದ ಮಾಹಿತಿಯನ್ನು ತೆಗೆದುಕೊಳ್ಳುತ್ತಿದ್ದರು ಮತ್ತು ಹೊರಟು ಹೋಗುತ್ತಿದ್ದರು. ಕೊನೆಗೆ 4–5 ಶಿಕ್ಷಕರು ಮಾತ್ರ ಉಳಿದಿದ್ದರು. ಅವರೂ ಸ್ವಲ್ಪ ಹರಟೆ ಹೊಡೆದು ಹೊರಟು ಹೋದರು. ಮಾಸಿಕ ಸಭೆಯ ಈ ದಿನ ಒಂದು ವಿಧದ ರಜಾದಿನ. ನಮ್ಮ ಸಿ.ಆರ್.ಸಿ. ಸಮನ್ವಯಾಧಿಕಾರಿಗಳು ಶಿಕ್ಷಕರನ್ನು 2–4 ಗಂಟೆಗಳ ಕಾಲ ಒಂದು ಕಡೆ ಸೇರಿಸಿ, ಅವರ ನಡುವೆ ಸಾರ್ಥಕ ಚರ್ಚೆ ನಡೆಯಲು ಅನುವಾಗುವಂತಹ ಉತ್ತಮ ವಾತಾವರಣ ರೂಪಿಸಲು ಅಸಮರ್ಥರಾಗಿದ್ದಾರೆ.



ಸಭೆಯ ನಡುವೆ ಕಾರ್ಮಿಕ ಸಂಘಟನೆಯ ನಾಯಕರು ಚಂದಾ ವಸೂಲಿಗಾಗಿ ಬಂದರು. ಅವರು ಚಂದಾ ವಸೂಲಿ ಕುರಿತು ಮಾತು ತೆಗೆಯುತ್ತಿದ್ದಂತೆ ನಾನು ಸಭೆಯಿಂದ ಎದ್ದು ಹೊರಬಂದೆ. ನನಗೆ ಇಂತಹ ರಾಜಕೀಯ ಇಷ್ಟವಾಗುವುದಿಲ್ಲ ಮತ್ತು ತಮ್ಮ ನಾಯಕತ್ವದಿಂದ ಉಳಿದ ಶಿಕ್ಷಕರನ್ನೂ ದಾರಿ ತಪ್ಪಿಸುವ, ತಪ್ಪು ದಾರಿಗೆಳೆಯುವವರನ್ನೂ ಇಷ್ಟ ಪಡುವುದಿಲ್ಲ.

ನಮ್ಮ ಶಿಕ್ಷಕ ನಾಯಕರು ಶಿಕ್ಷಣದಲ್ಲಿ ತಮ್ಮ ಪಾತ್ರವನ್ನು ಬಹಳ ಸೀಮಿತಗೊಳಿಸಿಕೊಂಡಿದ್ದಾರೆ; ಕೇವಲ ವೇತನ, ಸೇವಾ ನಿಯಮಾವಳಿಗಳು ಅಥವಾ ವರ್ಗಾವಣೆಗೆ ಸಂಬಂಧಿಸಿದ ವಿಷಯಗಳಲ್ಲಿ ಸಹಾಯ ಮಾಡುವುದು. ಇದು ಸತ್ಯ, ಏಕೆಂದರೆ ಒಂದು ವೇಳೆ ಸರ್ಕಾರವೇನಾದರೂ ಶಿಕ್ಷಕರ ಸೇವಾ ನಿಯಮಗಳ ವಿರುದ್ಧ ಪ್ರತಿಕೂಲ ನಿರ್ಣಯವೇನಾದರೂ ಕೈಗೊಂಡರೆ ಶಿಕ್ಷಕ ನಾಯಕರು ಸರ್ಕಾರದ ವಿರುದ್ಧ ದೊಡ್ಡ ಮಟ್ಟದಲ್ಲಿ ಧ್ವನಿಯೆತ್ತುತ್ತಾರೆ ಮತ್ತು ಸರ್ಕಾರ ಇವರಿಗೆ ತಲೆಬಾಗುತ್ತದೆ. ಶಿಕ್ಷಕರು ಏನು ಕೇವಲ ಸರ್ಕಾರಿ ನೌಕರರೇ? ಒಂದು ವೇಳೆ ಶಿಕ್ಷಣವು ಮಗುವಿನ ಸರ್ವಾಂಗೀಣ ಬೆಳವಣಿಗೆಗೆ ಇರುವ ಸಾಧನ ಎಂದಾದರೆ, ಈ ಶಿಕ್ಷಕ ನಾಯಕರಿಗೆ ಇಂತಹ ಶಿಕ್ಷಣ ಸಂಬಂಧಿ ನಿರ್ಣಯಗಳನ್ನು ಕೈಗೊಳ್ಳುವಲ್ಲಿ ಏನೂ ಪಾತ್ರವಿಲ್ಲವೇ?

ನಾನು ಡಿ.ಪಿ.ಇ.ಪಿ. ಮತ್ತು ಅದಕ್ಕಿಂತ ಪೂರ್ವದಲ್ಲಿ ಹಾಗೂ ನಂತರದ ಸರ್ವ ಶಿಕ್ಷಣ ಅಭಿಯಾನದ ಶಿಕ್ಷಕರ ತರಬೇತಿಗಳಲ್ಲಿ ಪ್ರಾರಂಭದಿಂದಲೂ ಕೆಲಸ ಮಾಡಿದ್ದೇನೆ. ಯಾವ ಶಿಕ್ಷಕ ನಾಯಕನೂ ಒಂದು ದಿನ ಪೂರ್ತಿ ತರಬೇತಿಯಲ್ಲಿ ಕುಳಿತುಕೊಂಡಿದ್ದನ್ನು ನೋಡಿಲ್ಲ. ನಾಯಕರಾಗಿರುವುದರ ಒಂದು ಲಾಭವೆಂದರೆ ತರಬೇತಿಗಳಿಂದ ಯಾವಾಗ ಬೇಕಾದರೂ ಎದ್ದು ಹೋಗುತ್ತಿರಬಹುದು! ಈ ನಾಯಕರೆನಿಸಿಕೊಂಡವರು ತರಬೇತಿಯ ಗುಣಮಟ್ಟವನ್ನು ಸುಧಾರಿಸುವುದರ ಬಗ್ಗೆ ಸಲಹೆ ನೀಡಿದ್ದನ್ನಾಗಲೀ, ಚರ್ಚೆ ಮಾಡಿದ್ದನ್ನಾಗಲೀ ನಾನು ಕೇಳಿಲ್ಲ, ಅದರ ಕುರಿತು ಎಲ್ಲಿಯೂ ಓದಿಲ್ಲ. ಒಂದು ವೇಳೆ ತರಬೇತಿ ಸಮಯದಲ್ಲಿ ಊಟದ ವ್ಯವಸ್ಥೆ ಅಥವಾ ಇತರೆ ಯಾವುದರಲ್ಲಾದರೂ ಸಣ್ಣ ತೊಂದರೆಯಾದರೆ ಎಲ್ಲರೂ ಜೋರಾಗಿ ಗಲಾಟೆ ಮಾಡುತ್ತಾರೆ. ಅದರಲ್ಲೂ ಎಲ್ಲ ಶಿಕ್ಷಕರ ಹಿತಬಯಸುವುದು ಕಡಿಮೆ. ಒಮ್ಮೊಮ್ಮೆ ಹೀಗೂ ಆಗುವುದುಂಟು ಕೇವಲ ಬಿ.ಆರ್.ಸಿ. ಸಂಯೋಜಕರು ಅವರ ಕಡೆ ಇಲ್ಲ ಎಂಬ ಕಾರಣಕ್ಕೆ ಅಥವಾ ಅವರ ಮೇಲಿನ ಈರ್ಷೆಯಿಂದ ಯಾವುದೋ ನೆಪ ಮಾಡಿ ಜಗಳ ತೆಗೆಯುತ್ತಾರೆ.

ಶಿಕ್ಷಕ ನಾಯಕರು ಟಾಕು–ಠೀಕಾಗಿ ಚಂದಾ ವಸೂಲಿ ಮಾಡುತ್ತಾರೆ. ಆದರೆ ಚುನಾವಣಾ ಸಮಯ ಬಂದಾಗ ಹಣ ದುರುಪಯೋಗವಾಗಿದೆ ಎಂದು ಒಬ್ಬರ ಮೇಲೊಬ್ಬರು ಕೆಸರೆರಚಾಡುತ್ತಾರೆ. ಚಂದಾ ವಸೂಲಿ ಮಾಡಲು ಅನೇಕರು ಬರುತ್ತಾರೆ ಆದರೆ ವಸೂಲಿ ಮಾಡಿದ ಹಣಕ್ಕೆ ಯಾರೂ ಸರಿಯಾದ ಲೆಕ್ಕ ಕೊಡುವುದಿಲ್ಲ. ಒಬ್ಬ ಸಾಧಾರಣ ಶಿಕ್ಷಕನಿಗೆ ತಾನು ನೀಡಿದ ಹಣ ಹೇಗೆ ಖರ್ಚಾಯಿತು ಎಂದು ತಿಳಿಯುವುದೇ ಇಲ್ಲ. ಸರ್ಕಾರವು ರಾಜ್ಯಕ್ಕಾಗಿ ಪಠ್ಯಕ್ರಮ ರಚಿಸುತ್ತದೆ ಅಥವಾ ಪರಿಷ್ಕರಣೆ ಮಾಡುತ್ತದೆ, ಪಠ್ಯ ಪುಸ್ತಕಗಳನ್ನು ರಚಿಸುತ್ತದೆ, ಶಿಕ್ಷಣ ಸಮಿತಿಗಳನ್ನು ರಚಿಸುತ್ತದೆ. ಈ ಚಟುವಟಿಕೆಗಳು ಶಿಕ್ಷಣದ ದೃಷ್ಟಿಯಿಂದ ಬಹಳ ಮುಖ್ಯವಾದುವು. ಆದರೆ ಈ ಯಾವುದೇ ಚಟುವಟಿಕೆಗಳಲ್ಲಿ ಶಿಕ್ಷಕ ಸಂಘಟನೆಗಳು ಧನಾತ್ಮಕವಾಗಿಯಾಗಲೀ, ಋಣಾತ್ಮಕವಾಗಿಯಾಗಲೀ ಹಸ್ತಕ್ಷೇಪ ಮಾಡುವುದಿಲ್ಲ. ಯಾವುದೇ ಶಿಕ್ಷಕ ನೇತಾರರ ಬಳಿ ಪಠ್ಯಕ್ರಮದ ಪ್ರತಿ ಇರುವುದು ಅಥವಾ ಪಠ್ಯಪುಸ್ತಕದ ಕುರಿತಾಗಲೀ, ಅದರಲ್ಲಿ ಸಂಯೋಜಿಸಿರುವ ಪಠ್ಯವಸ್ತುವಿನ ಬಗ್ಗೆಯಾಗಲೀ ಅವರು ಮಾತನಾಡುವುದು ನನಗೆ ಅನುಮಾನ. ಶಿಕ್ಷಣ ಪ್ರಕ್ರಿಯೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದ ದಿವಂಗತ ಪದಮ್ ಸಿಂಗ್‌ರಂತಹ ಶಿಕ್ಷಕ ನೇತಾರರು ಸಿಗುವುದು ತುಂಬಾ ವಿರಳ. ಉಳಿದವರು ಬಹುಶಃ ಅವರ ಶಾಲೆಯ ನಾಲ್ಕೈದು ಮಕ್ಕಳ ಹೆಸರುಗಳನ್ನೂ ಸಹ ನೆನಪಿಸಿಕೊಳ್ಳಲಾರರು.

ಶಿಕ್ಷಕರ ವರ್ಗಾವಣೆ ಪ್ರಕ್ರಿಯೆಯಲ್ಲಿಯೂ ಈ ಶಿಕ್ಷಕ ನೇತಾರರಿಂದ ಯಾವುದೇ ಪರಿಣಾಮಕಾರಿ ಕ್ರಮಗಳನ್ನು ರೂಪಿಸಲಾಗಿಲ್ಲ. ವರ್ಗಾವಣಾ ಪ್ರಕ್ರಿಯೆ ಪ್ರಾರಂಭವಾಗುತ್ತಲೇ ಇವರ ಪತ್ನಿಯರು ಹಾಗೂ ಮೇಲಾಧಿಕಾರಿಗಳೊಡನೆ ಉತ್ತಮ ಸಂಪರ್ಕವಿರುವವರು ಒಳ್ಳೆ ಸ್ಥಳಗಳಿಗೆ ವರ್ಗವಾಗುತ್ತಾರೆ. ಇಲ್ಲೂ ಸಹ ಶಿಕ್ಷಕ ಮುಖಂಡರು ತಮ್ಮ ಪ್ರಭಾವ ಬೀರುತ್ತಾರೆ. ತಮ್ಮ ಅನುಚರರನ್ನು ಒಳ್ಳೆಯ ಸ್ಥಳಗಳಿಗೆ ವರ್ಗಾವಣೆ ಮಾಡಿಸುತ್ತಾರೆ. ಇವರ ಸಂಪರ್ಕ ಇಲ್ಲದ ಸಾಮಾನ್ಯ ಶಿಕ್ಷಕರನ್ನು ದೂರದ ಶಾಲೆಗಳಿಗೆ ವರ್ಗಾಯಿಸುತ್ತಾರೆ. ಅವರು ಜೀವನ ಪರ್ಯಂತ ದೂರದ ಶಾಲೆಗಳಲ್ಲೇ ಉಳಿಯಬೇಕಾಗುತ್ತದೆ. 10 ಮಕ್ಕಳಿಗೆ 3 ಶಿಕ್ಷಕರಿರುವ ಮತ್ತು 150 ಮಕ್ಕಳಿಗೆ ಒಬ್ಬರೇ ಶಿಕ್ಷಕರಿರುವ ಅನೇಕ ಶಾಲೆಗಳಿವೆ. ಇಂತಹ ಅವ್ಯವಸ್ಥೆಯನ್ನು ಸುಧಾರಿಸಲು ಈ ಮುಖಂಡರು ಏನು ಮಾಡಿದ್ದಾರೆ?

ಶಿಕ್ಷಕ ಮುಖಂಡರು ಹೆಚ್ಚುವರಿ ಕೆಲಸ – ಬೋಧನೇತರ ಚಟುವಟಿಕೆಗಳಿಗೆ ನಿಯೋಜಿಸುವುದನ್ನು ಸದಾ ಪ್ರತಿಭಟಿಸುತ್ತಾರೆ. ಆದರೆ ಈ ಹೆಚ್ಚುವರಿ ಹೊರೆಯಿಂದ ಶಿಕ್ಷಕರನ್ನು ಮುಕ್ತಗೊಳಿಸುವಂತೆ ಸರ್ಕಾರದ ಮೇಲೆ ಪ್ರಭಾವ ಬೀರಲು ವಿಫಲರಾಗಿದ್ದಾರೆ. ಇದಕ್ಕೆ ವಿರುದ್ಧವಾಗಿ ಪದೇ ಪದೇ ಅವರು ಇಂತಹ ಸಂದರ್ಭಗಳಲ್ಲಿ ಮಧ್ಯೆ ಪ್ರವೇಶಿಸಿ ಶಿಕ್ಷಕರನ್ನು ದಾರಿತಪ್ಪಿಸುತ್ತಾರೆ.

ಜೂನ್ 2008 ರಲ್ಲಿ ಶಿಕ್ಷಕರು ಬೂತ್ ಲೆವೆಲ್ ಅಧಿಕಾರಿ (ಬಿ.ಎಲ್.ಒ) ಕೆಲಸವನ್ನು ವಿರೋಧಿಸಿದರು. ಆದರೂ ಜುಲೈನಲ್ಲಿ ಕೆಲಸ ಮಾಡಬೇಕಾಯಿತು. ಇದರಿಂದ ಶಾಲೆಗೂ ಮತ್ತು ಮಕ್ಕಳಿಗೂ ತೊಂದರೆಯಾಯಿತು.

2006ರ ನವೆಂಬರ್–ಡಿಸೆಂಬರ್‌ನಲ್ಲಿ ಶಿಕ್ಷಕರಿಗೆ ಮತದಾರರಿಗೆ ಗುರುತಿನ ಚೀಟಿ ಮಾಡಿಕೊಡುವ ಕೆಲಸ ನೀಡಲಾಯಿತು. ಇದಕ್ಕಾಗಿ ಶಿಕ್ಷಕರು ಮತದಾರರ ಭಾವಚಿತ್ರ ಮತ್ತು ಇತರೆ ವಿವರಗಳನ್ನು ಸಂಗ್ರಹಿಸಬೇಕಾಗಿತ್ತು. ತಹಸೀಲ್ದಾರರಿಂದ ಜಿಲ್ಲಾಧಿಕಾರಿಗಳವರೆಗೆ ಎಲ್ಲ ಆಡಳಿತಾಧಿಕಾರಿಗಳು ಒತ್ತಡದಲ್ಲಿದ್ದರು. ಶಿಕ್ಷಕ ಮುಖಂಡರು ಇದರ ವಿರುದ್ಧ ಪ್ರತಿಭಟಿಸುವಂತೆ ಎತ್ತಿಕಟ್ಟಿದರು. ಕೆಲವರು ತಮಗೆ ನೀಡಿದ್ದ ಆದೇಶಗಳನ್ನೂ ಹಿಂತಿರುಗಿಸಿಬಿಟ್ಟರು. ಆದರೆ ಯಾವಾಗ ಅಧಿಕಾರಿಗಳು ಶಿಸ್ತಿನ ಕ್ರಮ ಜರುಗಿಸಲು ಮುಂದಾದರೋ ಆಗ ಈ ನಾಯಕರು ತೆಪ್ಪಗಾದರು.

ಇದೇ ರೀತಿ ಜೂನ್ ರಜೆಯಲ್ಲೂ ಶಿಕ್ಷಕರನ್ನು ಮತದಾರರ ಪಟ್ಟಿಯ ಪರಿಷ್ಕರಿಸುವ ಕಾರ್ಯಕ್ಕೆ ನಿಯೋಜಿಸಲಾಯಿತು. ಯಥಾ ಪ್ರಕಾರ ಶಿಕ್ಷಕ ನಾಯಕರು ಆದೇಶಗಳನ್ನು ಹಿಂತಿರುಗಿಸುವಂತೆ ಹೇಳಿದರು ಆದರೂ ಶಿಕ್ಷಕರು ಆ ಕಾರ್ಯವನ್ನು ಮಾಡಲೇಬೇಕಾಯಿತು.

ಶಾಲಾ ದಿನಗಳಲ್ಲಿ ತರಬೇತಿಗಳನ್ನು ನೀಡುವುದರಿಂದ ಮಕ್ಕಳ ಕಲಿಕೆಗೆ ತೊಂದರೆಯಾಗುತ್ತದೆ ಎಂದು ನಮ್ಮ ಶಿಕ್ಷಕ ಮುಖಂಡರು ಉತ್ತರಾಖಂಡ್‌ನ ರಾಜ್ಯ ಯೋಜನಾ ನಿರ್ದೇಶಕರಿಗೆ ಎಲ್ಲಾ ಶಿಕ್ಷಕ ತರಬೇತಿಗಳನ್ನು ಬೇಸಿಗೆ ರಜೆಯಲ್ಲೇ ನೀಡಬೇಕೆಂದು ಒಂದು ಲಿಖಿತ ಮನವಿ ಪತ್ರವನ್ನು ನೀಡಿದರು. ರಾಜ್ಯ ಯೋಜನಾಧಿಕಾರಿಗಳ ಕಛೇರಿ ಈ ಸಲಹೆಯನ್ನು ಪುರಸ್ಕರಿಸಿ ಮೇ 21 ರೊಳಗೆ ಜನಪದಗಳ ಅನುಸಾರ ರಾಜ್ಯ ಮಟ್ಟ, ತಾಲೂಕು ಮಟ್ಟದ ಸಂಪನ್ಮೂಲ ವ್ಯಕ್ತಿಗಳ ತರಬೇತಿ ಮಾಡ್ಯೂಲ್ ತಯಾರಿಸಿತು. ಆದರೆ ಯಾವಾಗ ಮೊದಲ ಬ್ಯಾಚ್‌ನ ತರಬೇತಿಗಳು ಪ್ರಾರಂಭವಾದವೋ ಆಗ ನಮ್ಮ ಶಿಕ್ಷಕ ಮುಖಂಡರು ರಜಾವಧಿಯಲ್ಲಿ ಯಾವುದೇ ತರಬೇತಿಗಳನ್ನು ನೀಡಬಾರದೆಂದು ಪ್ರತಿಭಟಿಸಿದರು. ಶಿಕ್ಷಕರು ತರಬೇತಿಯನ್ನು ಪೂರ್ಣಗೊಳಿಸದೆ ಮನೆಗೆ ತೆರಳಬೇಕಾಯಿತು.

ನಮ್ಮ ಶಿಕ್ಷಕ ಮುಖಂಡರು ತಾವು ಹೆಣೆದಿದ್ದ ಬಲೆಯಲ್ಲಿ ತಾವೇ ಸಿಲುಕಿದ್ದರು. ವಿವಿಧ ತರಬೇತಿಗಳು ಜೂನ್‌ನಲ್ಲಿ ಮುಕ್ತಾಯವಾದವು. ಆದರೆ ಉಂಟಾಗಿದ್ದ ಗೊಂದಲದಿಂದ ತರಬೇತಿಗಳ ಗುಣಮಟ್ಟ ಕಡಿಮೆಯಾಯಿತು. ನಮ್ಮ ಶಿಕ್ಷಕ ನಾಯಕರು ಬೇರೆ ಬೇರೆ ಸನ್ನಿವೇಶಗಳಲ್ಲಿ ಹೇಗೆ ದ್ವಂದ್ವ ನೀತಿಯನ್ನು ಅನುಸರಿಸುತ್ತಾರೆ ಎಂಬುದಕ್ಕೆ ಇದು ಕೇವಲ ಒಂದು ಉದಾಹರಣೆ.

ಹಾಗಾಗಿ ಚಂದಾ ವಸೂಲಿ ಮಾಡಲು ಬಂದ ಮುಖಂಡರಿಗೆ ನಾನು ಚಂದಾ ನೀಡಲಿಲ್ಲ. "ಕಳೆದ ವರ್ಷ ನೀಡಿದ ಹಣಕ್ಕೆ ಖರ್ಚಿನ ವಿವರಣೆ ನೀಡಿದರೆ ಈ ವರ್ಷ ಚಂದಾ ನೀಡುವ ಬಗ್ಗೆ ಆಲೋಚಿಸಬಹುದು" ಎಂದೆ. ಇತರೆ ಶಿಕ್ಷಕರು ಚಂದಾ ನೀಡಿದರು ಆದರೆ ನಾನು ಕೊಡಲಿಲ್ಲ. ಶಿಕ್ಷಕರಿಂದ ಹಣ ವಸೂಲಿ ಮಾಡುವ ತಂತ್ರಗಳು ಶಿಕ್ಷಕ ಮುಖಂಡರಿಗೆ ಚೆನ್ನಾಗಿ ತಿಳಿದಿವೆ.

ಮಾಸಿಕ ಸಭೆಯಿಂದ ಹಿಂತಿರುಗಿ ಬರುವಾಗ ಸಿಮೆಂಟ್ ಅಂಗಡಿ ಮಾಲೀಕನು ಬಿಲ್ ನೀಡಿದನು. ಬಹುಶಃ ಅವನಿಗೆ ಪತ್ರ ತಲುಪಿರಬಹುದು. ಬಿಲ್ ಕೊಡುತ್ತಾ "ಗುರೂಜಿ, ನೀವು ಸುಮ್ಮನೆ ಸಿಟ್ಟು ಮಾಡಿಕೊಂಡಿರಿ" ಎಂದನು. ಆದರೆ ನಾನು ಯಾವುದೇ ಪ್ರತ್ಯುತ್ತರ ನೀಡದೆ, ಸುಮ್ಮನೆ ಮನೆಗೆ ಬಂದೆ.



ಇಂದು ನನಗೆ ಆರೋಗ್ಯ ಸರಿಯಿರಲಿಲ್ಲ. ಸ್ವಲ್ಪ ಹೊತ್ತು ದಿನ ಪತ್ರಿಕೆ ಓದಿದೆ. ನಂತರ ನವಾಜ್ ಷರೀಪರ ಹಿಂತಿರುಗುವಿಕೆ ಬಗ್ಗೆ ಹೆಚ್ಚಿಗೆ ತಿಳಿದುಕೊಳ್ಳಲು ಟಿ.ವಿ. ವೀಕ್ಷಿಸಲು ನಿಖಿಲ್‌ರವರ ಮನೆಗೆ ಹೋದೆ. ಟಿ.ವಿ.ಯಲ್ಲಿ ಮಧ್ಯ ಪ್ರದೇಶದ ಒಬ್ಬ ಶಿಕ್ಷಕನ ಬಗ್ಗೆ ಸುದ್ದಿ ಪ್ರಸಾರವಾಗುತ್ತಿತ್ತು. ಈ ಶಿಕ್ಷಕ ಸ್ಥಳೀಯ ಪತ್ರಿಕೆಯೊಂದರಲ್ಲಿ ತನ್ನ ಬಗ್ಗೆ ಭಾವನೆಗಳನ್ನು ಹಂಚಿಕೊಳ್ಳಲು ಮತ್ತು ತನ್ನ ಶಾರೀರಿಕ ಬಯಕೆಗಳನ್ನು ತೀರಿಸಲು ಒಬ್ಬ ಗೆಳತಿ ಬೇಕೆಂದು ಜಾಹೀರಾತು ನೀಡಿದ್ದ. ಆ ಜಾಹೀರಾತು ಹಿಡಿದು ಪೋಲೀಸರು ಸ್ಟಿಂಗ್ ಆಪರೇಷನ್ ಮಾಡಿ ಶಿಕ್ಷಕನನ್ನು ಬಂಧಿಸಿದ್ದರು. ವಿಚಾರಣೆ ನೆಪದಲ್ಲಿ ಅಸಭ್ಯವೆನಿಸುವ ಪ್ರಶ್ನೆಗಳನ್ನು ಪದೇ ಪದೇ ಕೇಳಿ ಅಪಹಾಸ್ಯ ಮಾಡಿ ಖುಷಿ ಪಡುಯುತ್ತಿದ್ದರು. ಶಿಕ್ಷಕನು ಅವಮಾನದಿಂದ ಭವಿಷ್ಯದಲ್ಲಿ ಹೀಗೆ ಮಾಡುವುದಿಲ್ಲ ಎಂದು ಗೋಗರೆಯುತ್ತಿದ್ದ. ಚಾನೆಲ್‌ನವರು ಈ ದೃಶ್ಯವನ್ನು ಪದೇ ಪದೇ ತೋರಿಸುತ್ತಿದ್ದರು. ನನ್ನ ಮನದಲ್ಲಿ ಕೆಲವು ಪ್ರಶ್ನೆಗಳು ಉದ್ಭವಿಸುತ್ತಿದ್ದವು.

ಚಾನೆಲ್‌ಗಳು ಇಂತಹ ಸುದ್ದಿಗಳನ್ನು ಪ್ರಸಾರ ಮಾಡಿ ಏನು ಹೇಳಲು ಪ್ರಯತ್ನಿಸುತ್ತಿವೆ? ಯಾವುದು ಪ್ರಸಾರ ಮಾಡಲು ಯೋಗ್ಯವಾಗಿದೆ ಮತ್ತು ಯಾವುದು ಯೋಗ್ಯವಾಗಿಲ್ಲ? ಒಬ್ಬ ಬಡ ಶಿಕ್ಷಕನ ಮೇಲೆ ಸ್ಟಿಂಗ್ ಆಪರೇಷನ್ ಮಾಡಿ ಪೊಲೀಸ್‌ನವರು ಸಾಧಿಸಿದ್ದೇನು?

ಕದ್ದು ಮುಚ್ಚಿ ಮಾಡಿದರೆ ಯಾವುದೂ ಅನೈತಿಕವಲ್ಲವೊ ಅಂತಹ ದೇಶದಲ್ಲಿ, ಅಂತಹ ಸಮಾಜದಲ್ಲಿ 'ನೈತಿಕತೆ'ಯ ಅರ್ಥವನ್ನು ನಿರೂಪಿಸುವ ಅಧಿಕಾರವನ್ನು ಪೊಲೀಸರಿಗೆ, ಪತ್ರಕರ್ತರಿಗೆ ಮತ್ತು ಚಾನೆಲ್‌ನವರಿಗೆ ಯಾರು ಕೊಟ್ಟರು?

ಆ ಶಿಕ್ಷಕ ಕದ್ದು ಮುಚ್ಚಿ ತನ್ನ ಬಯಕೆಗಳನ್ನು ಈಡೇರಿಸಕೊಳ್ಳಬಹುದು. ಆಗ ಅದು ಪೊಲೀಸರಿಗಾಗಲೀ, ಪತ್ರಕರ್ತರಿಗಾಗಲೀ ಅವನ ಕುರಿತು ಗೊತ್ತಾಗುವುದಿಲ್ಲ. ಆದರೆ ಶಿಕ್ಷಕ ತನ್ನ ಭಾವನೆಗಳನ್ನು ಮುಕ್ತವಾಗಿ ವ್ಯಕ್ತಪಡಿಸಿದ್ದಾನೆ. ಇದು ತಪ್ಪಾದರೆ ಪ್ರಜಾಪ್ರಭುತ್ವದಲ್ಲಿ ಸ್ವಾತಂತ್ರ್ಯಕ್ಕೆ ಅರ್ಥವೇನಿದೆ?

## ಮೌಸಿ ಬೆಕ್ಕು ಮತ್ತು ಇಲಿ.....

ಮೌಸಿ ಬೆಕ್ಕು ಒಂದು ಸಲ,
ಹಿಡಿಯಿತು ಕೊಬ್ಬಿದ ಇಲಿಯೊಂದ.
ಇಲಿಯೇನೋ ಕೊಬ್ಬಿತ್ತು, ತಾಜಾ ಇತ್ತು,
ಆದರೆ ಅದರ ಹಲ್ಲೊಂದು ಮುರಿದಿತ್ತು.

ಒಂದು ಹಲ್ಲಿನ ಇಲಿಯ ನೋಡಿ,
ಮುಸಿಮುಸಿ ನಕ್ಕಿತು ಮೌಸಿ.
ಸರ‍್ರನೆ ಜಾರಿತು, ಸರಸರ ಓಡಿತು ಕೊಬ್ಬಿದಿಲಿ,
ಪೆಚ್ಚಾಯಿತು ಮೌಸಿ, ಬೇಟೆ ತಪ್ಪಿದ ನೋವಿನಲಿ.



**11–ಸೆಪ್ಟೆಂಬರ್–2007**

ಇಂದಿನಿಂದ ಶಾಲಾ ವೇಳೆ ಬದಲಾಗಿದೆ. ಬೆಳಿಗ್ಗೆ 10 ಗಂಟೆಗೆ ಪ್ರಾರಂಭವಾಗಿ ಸಂಜೆ 4 ಗಂಟೆಗೆ ಮುಕ್ತಾಯವಾಗುತ್ತದೆ. ಇಂದು ಸರಿಯಾಗಿ 9–30ಕ್ಕೆ ಶಾಲೆ ತಲುಪಿದೆ. ಬಹುಪಾಲು ಮಕ್ಕಳು ಆ ವೇಳೆಗಾಗಲೇ ಶಾಲೆಗೆ ಬಂದಿದ್ದರು. ಈಗ ಎಲ್ಲಾ ಮಕ್ಕಳು ಸಮಯಕ್ಕೆ ಸರಿಯಾಗಿ ಬರುತ್ತಾರೆ ಏಕೆಂದರೆ ಆ ವೇಳೆಗೆ ಶಾಲೆಯಲ್ಲಿ ಮಕ್ಕಳಿಗೆ ಊಟ ದೊರೆಯುತ್ತದೆ. ತಾಯಂದಿರು ಮಕ್ಕಳನ್ನು ಮುಂಜಾನೆ ಬೇಗ ಶಾಲೆಗೆ ಕಳುಹಿಸುತ್ತಾರೆ. ದೂರದ ತಾಂಡಾ–ಚನಿಯಾದಿಂದ ಬರುವ ಚಿಕ್ಕ ಮಕ್ಕಳೂ ಸಹ 10–30ರೊಳಗೆ ಶಾಲೆ ತಲುಪುತ್ತಾರೆ. ಅದೂ ಮೈತುಂಬಾ ರಾಡಿಯೊಂದಿಗೆ! ಅಡುಗೆಯಾಕೆಯೂ ಇಂದು ಸಮಯಕ್ಕೆ ಸರಿಯಾಗಿ ಬಂದಿದ್ದಳು.

ಶಾಲೆ ತಲುಪುವಷ್ಟರಲ್ಲಿ ಆಫೀಸ್ ಬೀಗ ಮುರಿದಿರುವುದು ನನ್ನ ಗಮನಕ್ಕೆ ಬಂತು. ಯಾರೋ ಉದ್ದೇಶಪೂರ್ವಕವಾಗಿ ಕಲ್ಲಿನಿಂದ ಹೊಡೆದು ಬೀಗ ಮುರಿದಿದ್ದರು. ಆದರೆ ಒಳಗೆ ಏನೂ ತೊಂದರೆ ಮಾಡಿರಲಿಲ್ಲ. ಶಾಲೆಯ ಬೀಗಗಳನ್ನು ಮುರಿಯುವುದು ಸಾಮಾನ್ಯವಾಗಿಬಿಟ್ಟಿದೆ. ಈ ಹಿಂದೆಯೂ ಸಾಕಷ್ಟು ಸಲ ಹೀಗಾಗಿತ್ತು. ಕೆಲವು ಸಲ ಬೀಗ ಮುರಿದು ಬಿಸ್ಕೆಟ್ ಪ್ಯಾಕ್‌ಗಳನ್ನು ಕದ್ದೊಯ್ದಿದ್ದರು. ಒಮ್ಮೆ ಅಕ್ಕಿಯನ್ನು ಕದ್ದಿದ್ದರು. ಅನೇಕ ಬಾರಿ ನಾನು ಬೀಗಗಳನ್ನು ಬದಲಿಸಿದ್ದೇನೆ. ನಮ್ಮ ಶಾಲೆ ವಸತಿ ಪ್ರದೇಶದಿಂದ ಸ್ವಲ್ಪ ದೂರದಲ್ಲಿದೆ ಮತ್ತು ಒಂಟಿಯಾಗಿದೆ. ವರಾಂಡದಲ್ಲಿ ಬೀಡಿ ಚೂರುಗಳು ಮತ್ತು ಖಾಲಿ ತಿಂಡಿ ಪೊಟ್ಟಣಗಳು ಯಾವಾಗಲೂ ಬಿದ್ದಿರುತ್ತವೆ. ಆದರೆ ಇದುವರೆಗೂ ಆ ಕಿಡಿಗೇಡಿಗಳನ್ನು ಕಂಡು ಹಿಡಿಯಲು ಸಾಧ್ಯವಾಗಿಲ್ಲ.

ಮುರಿದ ಬೀಗವನ್ನು ನೋಡಿ ಖಿನ್ನನಾದೆ. ಈ ಶಾಲೆಯನ್ನು ಸುಂದರ ಮತ್ತು ಆಕರ್ಷಕಗೊಳಿಸುವ ನನ್ನ ಆಸೆಗೆ ಮತ್ತೆ ಹಿನ್ನಡೆಯಾಯಿತು. ಶಾಲೆಯ ಬಗ್ಗೆ ಸಮುದಾಯ ತೋರುತ್ತಿರುವ ಅನಾದರ ಮತ್ತು ಉಪೇಕ್ಷೆಗಳ ಪರಿಣಾಮದಿಂದಲೇ ಇಂತಹ ಕುಚೇಷ್ಟೆ ಆಗುತ್ತವೆ ಎಂದು ನೆನೆಸಿಕೊಂಡಾಗ ಮನಸ್ಸು ಆಕ್ರೋಶದಿಂದ ಕುದಿಯುತ್ತದೆ. ಅನೇಕ ಸಲ ಈ ಶಾಲೆಗಾಗಿ ಮತ್ತು ಇಂತಹವರ ಮಕ್ಕಳಿಗಾಗಿ ಏನೂ ಮಾಡಬಾರದು ಎಂದುಕೊಳ್ಳುತ್ತೇನೆ. ಆದರೆ ಮಕ್ಕಳ ಮುಂದೆ ಹೋದಾಗ ಅವರ ಮುಗ್ದ ಮುಖಗಳನ್ನು ನೋಡಿ ಕೋಪವೆಲ್ಲಾ ಕರಗಿಹೋಗುತ್ತದೆ ಮತ್ತು ನಾನು ಮತ್ತೆ ಆಲೋಚಿಸುತ್ತೇನೆ "ಇಷ್ಟಕ್ಕೂ ಈ ನಿಷ್ಕಪಟ ಮುಗ್ಧ ಮಕ್ಕಳು ಮಾಡಿದ ತಪ್ಪೇನು?" ಪುನಃ ನಾನು ಅದೇ ಸ್ಫೂರ್ತಿ ಮತ್ತು ಚೈತನ್ಯದಿಂದ ಪುಟಾಣಿಗಳಿಗಾಗಿ ಹೋರಾಡಲು ತೊಡಗುತ್ತೇನೆ.

ಮಕ್ಕಳು ಶಾಲೆಗೆ ಬಂದೊಡನೆ ಬಿಂದು ಮತ್ತು ವಿಮಲೇಶ್ ತರಗತಿ ಕೊಠಡಿಗಳನ್ನು ಸ್ವಚ್ಛ ಮಾಡಿಸಿ ನೆಲದ ಮೇಲೆ ಚೀಲಗಳನ್ನು ಹಾಸಿ ಪ್ರಾರ್ಥನೆಯನ್ನು ಆರಂಭಿಸಿದರು. 10 ಗಂಟೆಗೆ ಸರಿಯಾಗಿ ಪ್ರಾರ್ಥನೆ ಆರಂಭವಾಯಿತು. 10–30ಕ್ಕೆ ಮಕ್ಕಳು ತರಗತಿ ಕೊಠಡಿಗಳಲ್ಲಿ ಕುಳಿತುಕೊಂಡರು. ಮಕ್ಕಳು ತರಗತಿಗಳಲ್ಲಿ ಕುಳಿತುಕೊಂಡ ಮೇಲೆ ಅವರು ಅಡುಗೆಯವರಿಗೆ ಅಕ್ಕಿ, ಬೇಳೆ, ಎಣ್ಣೆ, ಉಪ್ಪು ಮತ್ತು ಇತರೆ ಆಹಾರ ಪದಾರ್ಥಗಳನ್ನು ನೀಡಿದರು. ಅಡುಗೆಯಾಕೆ ಅಡುಗೆ ಮಾಡಲು ಪ್ರಾರಂಭಿಸಿದಳು. ಇಷ್ಟರಲ್ಲಿ ನಿಖರವಾದ ಸಂಖ್ಯೆ ಬಂದಿರುತ್ತದೆ, ಮಕ್ಕಳನ್ನು ಎಣಿಸಿ ನಿಖರವಾದ ಸಂಖ್ಯೆ ದೊರೆತ ನಂತರ ಅವರ ಅನುಪಾತಕ್ಕೆ ಅನುಗುಣವಾಗಿ ಆಹಾರ ಪದಾರ್ಥಗಳನ್ನು ಅಡುಗೆಯಾಕೆಗೆ ನೀಡುತ್ತಾರೆ. ಇಂದು ಸರಿಯಾಗಿ 12–15ಕ್ಕೆ ಅಡುಗೆ ತಯಾರಿಸಿದಳು.

ಶಾಲಾ ಆವರಣದಲ್ಲಿ ಹುಲ್ಲು ಮತ್ತು ಇತರೆ ಗಿಡಗಂಟಿಗಳು ತುಂಬಾ ಬೆಳೆದಿದ್ದವು. ಆದ್ದರಿಂದ ಇಂದು ಮೊದಲ ಅವಧಿಯಲ್ಲಿ ನಾನು 4 & 5 ನೆಯ ತರಗತಿ ಮಕ್ಕಳನ್ನು ಕರೆದುಕೊಂಡು ಶಾಲಾ ಆವರಣದ ಸ್ವಚ್ಛತೆ ಮಾಡಿಸಿದೆ. ಈ ಕೆಲಸದಲ್ಲಿ ನಾನು ಮಕ್ಕಳೊಂದಿಗೆ ಕೈ ಜೋಡಿಸಿದೆ. ಹಳ್ಳಿ ಮಕ್ಕಳು ಇಂಥ ಕೆಲಸಗಳಲ್ಲಿ ನಿಪುಣರಾಗಿರುತ್ತಾರೆ. ಶಾರೀರಿಕ ಕೆಲಸಗಳನ್ನು ಮಾಡಲು ಅವರು ಬೇಸರ ಪಡುವುದಿಲ್ಲ ಬದಲಿಗೆ ತುಂಬಾ ಖುಷಿ ಪಡುತ್ತಾರೆ. ಒಂದು ಗಂಟೆ ಸಫಾಯಿ ಮಾಡಿದ ನಂತರ ಎರಡೂ ತರಗತಿಗಳ ಮಕ್ಕಳಿಗೆ 4ನೇ ತರಗತಿಯ 3ನೇ ಪಾಠದಲ್ಲಿನ ಪಂಚತಂತ್ರದ ಕಥೆಯನ್ನು ಹೇಳಿದೆ. ಕಥೆಯ ಬಗ್ಗೆ ಚರ್ಚೆ ಮಾಡಿದೆವು ಮತ್ತು ಮೌಖಿಕ ಪ್ರಶ್ನೆಗಳನ್ನು ಕೇಳಿದೆ. ನಂತರ ಕಥೆಯಲ್ಲಿ ತಮಗೆ ಅರ್ಥವಾಗದ ಪದಗಳನ್ನು ಗುರ್ತಿಸಲು ಹೇಳಿದೆ. ಮಕ್ಕಳು ಕಠಿಣ ಶಬ್ದಗಳನ್ನು ತಮ್ಮ ನೋಟ್ ಪುಸ್ತಕಗಳಲ್ಲಿ ಬರೆದರು. ನಾನು ಅವುಗಳ ಬಗ್ಗೆ ಚರ್ಚೆ ಮಾಡಿದೆ ಮತ್ತು ಅವುಗಳ ಅರ್ಥವನ್ನು ಮಕ್ಕಳಿಂದಲೇ ಹೇಳಿಸುವ ಪ್ರಯತ್ನ ಮಾಡಿದೆ. ನಂತರ ಎಲ್ಲಾ ಅರ್ಥಗಳನ್ನು ಕಪ್ಪು ಹಲಗೆಯ ಮೇಲೆ ಬರೆದು ನೋಟ್ ಪುಸ್ತಕಗಳಲ್ಲಿ ಬರೆದುಕೊಳ್ಳಲು ಹೇಳಿದೆ.

ಯಾವುದೇ ವಿಷಯದ ಕುರಿತು ಹೀಗೆ ಲಿಖಿತವಾಗಿ ಮತ್ತು ಮೌಖಿಕವಾಗಿ ಚರ್ಚೆ ಮಾಡುವುದು ಮಧ್ಯಾಹ್ನದವರೆಗೂ ಸಮಯ ತೆಗೆದುಕೊಳ್ಳುತ್ತದೆ. ಸರಿಯಾಗಿ ಓದಲು ಬರೆಯಲು ಬಾರದ ಮಕ್ಕಳಿಗೆ ವಿಷಯವನ್ನು ಅರ್ಥಮಾಡಿಸಲು ಅವರೊಡನೆ ಹೆಚ್ಚಿಗೆ ಮಾತನಾಡಬೇಕು. 4 & 5ನೇ ತರಗತಿಯಲ್ಲಿ ಅರ್ಧದಷ್ಟು ಮಕ್ಕಳಿಗೆ ಓದುವುದು, ಬರೆಯುವುದು ಇನ್ನೂ ಕಷ್ಟವೆನಿಸುತ್ತದೆ. ಅಂಥವರು ಮೌಖಿಕ ಸಂಭಾಷಣೆಯಿಂದ ಪಾಠವನ್ನು ಅರ್ಥ ಮಾಡಿಕೊಳ್ಳುವುದರ ಜತೆಗೆ ಕೇಳಿದ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನೂ ಕೊಡುತ್ತಾರೆ.

ಮಧ್ಯಾಹ್ನದ ವಿರಾಮದ ನಂತರ ಸಮಾಜ ವಿಷಯದಲ್ಲಿ ಬೆಳೆಗಳು, ತೋಟಗಳು ಮತ್ತು ನೀರಾವರಿ ಸಾಧನಗಳ ಬಗ್ಗೆ ಚರ್ಚಿಸಿದೆ. ಆದರೆ ಯಾವುದೇ ಲಿಖಿತ ಕಾರ್ಯವನ್ನು ಮಾಡಿಸಲಿಲ್ಲ. ಅಂತಿಮ ಅವಧಿಯಲ್ಲಿ ವಿಜ್ಞಾನ ವಿಷಯದಲ್ಲಿ ಶರೀರದ ಒಳಾಂಗಗಳು ಮತ್ತು ಅವುಗಳ ಕಾರ್ಯಗಳ ಬಗ್ಗೆ ಚರ್ಚಿಸಿದೆ. ಶ್ವಾಸಕೋಶಗಳ ಚಿತ್ರ ಬರೆದುಕೊಂಡು ಬರಲು ಗೃಹಪಾಠ ನೀಡಿದೆ.

3ನೇ ತರಗತಿಯನ್ನು ವಿಮಲಾ ಮತ್ತು 1–2ನೇ ತರಗತಿಗಳನ್ನು ಬಿಂದುಲೇಶ್ ನೋಡಿಕೊಂಡರು.

ಇಂದು ಒಟ್ಟಾರೆ ಉಪಸ್ಥಿತಿ 53/63 ಇತ್ತು. ಸೆಪ್ಟೆಂಬರ್ ಮೊದಲ ವಾರದಲ್ಲಿ ಹಾಜರಾತಿ ಕಡಿಮೆಯಾಗಲು ಪ್ರಾರಂಭಿಸುತ್ತದೆ.

ಮಳೆಗಾಲ ಕೊನೆಯಾಗಿ ಸೂರ್ಯನ ಬಿಸಿಲು ಪ್ರಖರಗೊಳ್ಳುತ್ತಿದ್ದಂತೆ ಮಕ್ಕಳು ತಮ್ಮ ಪೋಷಕರೊಡನೆ ಭಾಂಗ್ ಬೆಳೆಯಲು ಹೋಗುತ್ತಾರೆ. ಮುಂದಿನ ಎರಡು ತಿಂಗಳು ಮಕ್ಕಳು ಈ ಕೆಲಸದಲ್ಲಿ ನಿರತರಾಗಿರುತ್ತಾರೆ.

ಮನೆಗೆ ಬಂದೆ. ಟೀ ಕುಡಿದು ದಿನಪತ್ರಿಕೆ ಓದಿದ ನಂತರ ಚಕ್ ಮಕ್ ಮಾಸಪತ್ರಿಕೆಯ ಆಗಸ್ಟ್ ತಿಂಗಳ ಸಂಚಿಕೆಯನ್ನು ಓದಿದೆ. ಸಂಜೆ 5ರಿಂದ 6ರ ವರೆಗೆ ಸುತ್ತಾಡಲು ಹೊರಗೆ ಹೋದೆ. 9ರಿಂದ 10–30ರ ವರೆಗೆ ದಿನಚರಿ ಬರೆದೆ. 11 ರವರೆಗೆ ಕದಂಬಿನಿ ಮಾಸಪತ್ರಿಕೆ ಓದಿ ನಂತರ ಮಲಗಿದೆ.

**13–ಸೆಪ್ಟೆಂಬರ್–2007**

ಇಂದು ನಾನು ಸಾಂದರ್ಭಿಕ ರಜೆ ಪಡೆದಿದ್ದೆ. ಮುಂಜಾನೆ 7–30ಕ್ಕೆ ಎದ್ದೆ, 9 ಗಂಟೆ ವೇಳೆಗೆ ತಯಾರಾಗಿ ಮಾರ್ಕೆಟ್ ಕಡೆ ಹೊರಟೆ. ಇಂದು ನಿಗದಿಗೊಳಿಸಿದ್ದ ಕಾರ್ಯಕ್ರಮದ ಅನುಸಾರ ನನ್ನ ಶಿಕ್ಷಕ ಮಿತ್ರ ದಿವಂಗತ ಹರೀಶ್ ಓಸ್ವಾಲ್ ಮನೆಗೆ ಸಾಂತ್ವನ ಹೇಳಲು ಹೋದೆ. ನನ್ನ ಜತೆಗೆ ಎನ್.ಪಿ.ಆರ್.ಸಿ. ಸಂಯೋಜಕರಾದ ಶ್ರೀ ಬಿಷ್ಟ್‌ರವರು, ಗಿರೀಶ್ ಥಪಲಿಯಾಲ್, ಸೋಬತಿ ವ್ಯಾಸ್, ರಜನಿ ಚೌಹಾಣ್, ಜಬ್ರಾದೇವಿ ಮತ್ತು ರವಿದತ್‌ರವರು ಬಂದಿದ್ದರು. ನಾವೆಲ್ಲಾ ಧೌಂತರಿಯಿಂದ 10 ಗಂಟೆಗೆ ಹೊರಟು ಮಧ್ಯಾಹ್ನದ ವೇಳೆಗೆ ಹರೀಶ್‌ರವರ ಊರಾದ ನ್ಯೂಗಾಂವ್ ತಲುಪಿದೆವು. ಹಾದಿ ದುರ್ಗಮವಾಗಿದ್ದರಿಂದ ನಡೆಯುವುದು ತುಂಬಾ ಕಷ್ಟವಾಯಿತು. 4–5 ಕಿ.ಮೀ. ಏರಿದ ನಂತರ ಅವರ ಊರನ್ನು ತಲುಪಿದೆವು.

ಮನೆಯಲ್ಲಿ ಶೋಕದ ವಾತಾವರಣವಿತ್ತು. ಭೇಟಿ ಮಾಡುವವರು ಬರುತ್ತಲೇ ಇದ್ದರು. ನಾವು ಹರೀಶರ ಅಣ್ಣ ಗಿರೀಶ್ ಓಸ್ವಾಲ್ ಮತ್ತು ಅವರ ತಂದೆಯವರನ್ನು ಭೇಟಿಯಾದೆವು. ಅವರಿಗೆ ಸಾಂತ್ವನ ಹೇಳಿದೆವು ಮತ್ತು ಗಂಟೆಗಟ್ಟಲೆ ಅವರ ಮನೆಯಲ್ಲೇ ಕುಳಿತಿದ್ದೆವು. ನಮ್ಮೊಡನೆ ಬಂದಿದ್ದ ಶಿಕ್ಷಕಿಯರು ದಿವಂಗತರ ತಾಯಿಗೆ ಮತ್ತು ಪತ್ನಿಗೆ ಸಮಾಧಾನ ಹೇಳಿದರು.



ಹರೀಶ್ ಒಬ್ಬ ಚತುರಮತಿ ಮತ್ತು ಮುಕ್ತವಾಗಿ ಮಾತನಾಡುವ ಶಿಕ್ಷಕನಾಗಿದ್ದ. ತನಗೆ ಅನಿಸಿದ್ದನ್ನು ಹೇಳಲು ಸಂಕೋಚ ಪಡುತ್ತಿರಲಿಲ್ಲ ಮತ್ತು ಯಾರಿಗೂ ಹೆದರುತ್ತಿರಲಿಲ್ಲ. ಪ್ರತಿಭಾವಂತನಾಗಿದ್ದರೂ ವ್ಯಸನಗಳಿಗೆ ದಾಸನಾಗಿದ್ದ. ಶಿಕ್ಷಕರು ಮತ್ತು ಸಮುದಾಯದಲ್ಲಿ ಜಗಳಗಂಟತನ ಮತ್ತು ವೃತ್ತಿಯೆಡೆಗಿನ ಬೇಜವಾಬ್ದಾರಿತನಗಳಿಂದ ಕುಖ್ಯಾತನಾಗಿದ್ದ. ಅವನು ಒಬ್ಬ ಉತ್ತಮ ಶಿಕ್ಷಕನಾಗಿರಲಿಲ್ಲ. ಆದರೆ ತನ್ನ ನಿಷ್ಕಲ್ಮಷ ಮನಸಿನಿಂದ ಹೆಸರುವಾಸಿಯಾಗಿದ್ದ. ಎಷ್ಟೇ ಜಗಳವಾಡಿದರೂ ಯಾವುದನ್ನೂ ಮನಸಿನಲ್ಲಿಟ್ಟುಕೊಳ್ಳುತ್ತಿರಲಿಲ್ಲ. ಅವನ ಚಟಗಳೇ ಅವನನ್ನು ಬಲಿ ತೆಗೆದುಕೊಂಡಿದ್ದವು.

ರಾತ್ರಿ ಮನೆಗೆ ಹೊರಟಾಗ ಅವನು ಕಂಠಪೂರಾ ಕುಡಿದಿದ್ದ. ಕುಡಿದ ನಶೆಯಲ್ಲಿ ಜಾರಿ ಬಿದ್ದಿದ್ದ. ಮಾರನೆಯ ದಿನ ಬೆಳಿಗ್ಗೆ ತುಂಬಾ ಹುಡುಕಿದ ನಂತರ ಮೃತದೇಹ ದೊರಕಿತ್ತು. ಬಹಳ ಪ್ರಯಾಸದಿಂದ ಹಗ್ಗಗಳನ್ನು ಕಟ್ಟಿ ಮೃತದೇಹವನ್ನು ಮೇಲೆ ಎಳೆಯಲಾಯಿತು.

**1–ಅಕ್ಟೋಬರ್–2007**

ಇಂದು ನಾನು 9–45ಕ್ಕೆ ಶಾಲೆ ತಲುಪಿದೆ. ಇಂದು ಶಾಲೆಯಲ್ಲಿದ್ದುದು ನಾನು ಒಬ್ಬನೇ. ಕೇವಲ 18 ಮಕ್ಕಳು ಮಾತ್ರ ಬಂದಿದ್ದರು. ಎಲ್ಲಾ ಮಕ್ಕಳನ್ನು ಒಂದು ಕಡೆ ಕೂರಿಸಿ ಮೊದಲು ಶುದ್ಧ ಬರಹ ಬರೆಸಿದೆ ನಂತರ ಉಕ್ತಲೇಖನ ಹೇಳಿದೆ ಮತ್ತು ಉಕ್ತಲೇಖನದಲ್ಲಿನ ತಪ್ಪುಗಳನ್ನು ತಿದ್ದಲು ಅವರ ಪುಸ್ತಕಗಳನ್ನು ಪರಸ್ಪರ ಬದಲಿಸಿಕೊಳ್ಳಲು ಹೇಳಿ ಅವರ ಸಹಪಾಠಿಗಳ ತಪ್ಪುಗಳನ್ನು ಸರಿಪಡಿಸಲು ತಿಳಿಸಿದೆ.

ಮಕ್ಕಳು ತಮ್ಮ ಗೆಳೆಯರ ತಪ್ಪುಗಳನ್ನು ತುಂಬಾ ಆಸಕ್ತಿಯಿಂದ ತಿದ್ದಿದರು, ಜತೆಗೆ ಹೆಚ್ಚೆಚ್ಚು ತಪ್ಪುಗಳನ್ನು ಹುಡುಕಲು ಪ್ರಯತ್ನಿಸಿದರು. ಈ ರೀತಿ ಮಾಡುವುದರಿಂದ ಮಕ್ಕಳ ಭಾಷಾಜ್ಞಾನ ಅಭಿವೃದ್ಧಿಯಾಗುತ್ತದೆ.

ಮಧ್ಯಂತರ ಬಿಡುವಿನವರೆಗೂ ಮಕ್ಕಳಿಗೆ ಭಾಷಾ ಕಾರ್ಯವನ್ನೇ ಮಾಡಿಸಿದೆ. 1–2ನೇ ತರಗತಿಯ 4 ಮಕ್ಕಳಿಗೆ ಪದಗಳನ್ನು ಓದಲು ಬರೆಯಲು ಹೇಳಿ ಉಳಿದ 14 ಮಕ್ಕಳಿಗೆ ಓದಲು ಕಥೆ ಪತ್ರಿಕೆಗಳನ್ನು ನೀಡಿ ಓದಿದ ಕಥೆಯಲ್ಲಿ ಐದೈದು ಪ್ರಶ್ನೆಗಳನ್ನು ರಚಿಸಲು ಹೇಳಿದೆ. ಪ್ರಾರಂಭದಲ್ಲಿ ಮಕ್ಕಳು ಏಕೆ? ಏನು? ಯಾರು? ಎಲ್ಲಿ? ಎಂಬ ಪ್ರಶ್ನೆಗಳನ್ನೇ ರಚಿಸುತ್ತಾರೆ. ಅವರಿಗೆ ಕೊಟ್ಟಿದ್ದ ಒಂದು ಕಥೆಯ ಹೆಸರು 'ಎರಡು ಮೇಕೆಗಳು'. ಈ ಕಥೆಗೆ ಮಕ್ಕಳು ಬರೆದಿದ್ದ ಪ್ರಶ್ನೆಗಳು ಹೀಗಿವೆ.

1. ಸೇತುವೆಯ ಮೇಲೆ ಯಾರು ಕುಳಿತಿದ್ದರು?

2. ಮತ್ತೊಂದು ಮೇಕೆ ಎಲ್ಲಿ ಮೇಯುತ್ತಿತ್ತು? ಇತ್ಯಾದಿ.

ಮಧ್ಯಾಹ್ನದ ಬಿಡುವಿನ ನಂತರ ಮಕ್ಕಳಿಗೆ ಒಂದು ಕಿರು ಪರೀಕ್ಷೆ ಕೊಟ್ಟೆ. ಗಾಂಧಿ ಜಯಂತಿ ಪ್ರಯುಕ್ತ ನಾಳೆ ಶುಭ್ರವಾದ ಬಟ್ಟೆ ಧರಿಸಿ ಶಾಲೆಗೆ ಬರುವಂತೆ ಹೇಳಿ ಮಧ್ಯಾಹ್ನ 2–30ಕ್ಕೆ ಮಕ್ಕಳನ್ನು ಮನೆಗೆ ಕಳುಹಿಸಿದೆ. ನಾನು 4 ಗಂಟೆವರೆಗೆ ಶಾಲೆಯಲ್ಲೇ ಉಳಿದೆ. ಎರಡು ಕಕ್ಷೆಗಳ ನಿರಂತರ ಮತ್ತು ವ್ಯಾಪಕ ಮೌಲ್ಯಮಾಪನದ ವಹಿಗಳನ್ನು ಪೂರ್ಣಗೊಳಿಸಿದೆ. ಮತ್ತು 4 ಗಂಟೆಗೆ ಮನೆಗೆ ತೆರಳಿದೆ.

## 2–ಅಕ್ಟೋಬರ್–2007

ಇಂದು ಗಾಂಧಿ ಜಯಂತಿ. 9 ಗಂಟೆಗೆ ಶಾಲೆ ತಲುಪಿದೆ. ಆ ವೇಳೆಗಾಗಲೆ ಮಕ್ಕಳು ಬಂದಿದ್ದರು. ಇಂದು ಶಾಲೆಯಲ್ಲಿ ಧ್ವಜಾರೋಹಣ ಕಾರ್ಯಕ್ರಮವಿತ್ತು. ಹತ್ತಿರದ ಮನೆಯವರಿಂದ ಒಂದು ಸಲಾಕೆಯನ್ನು ಎರವಲು ತಂದೆ. ಧ್ವಜಸ್ಥಂಭಕ್ಕಾಗಿ ಗುಂಡಿ ತೋಡಿದೆ. ಕಂಬಕ್ಕೆ ಒಂದು ಹಗ್ಗ ಜೋಡಿಸಿ ಧ್ವಜಸ್ಥಂಭ ನೆಟ್ಟೆ. ಧ್ವಜಸ್ಥಂಭದ ಬುಡದಲ್ಲಿ ಚಕ್ರ ರಚಿಸಿ, ಹೂಗಳಿಂದ ಅಲಂಕರಿಸಿದೆವು. ಮಕ್ಕಳು ಸಾಲಿನಲ್ಲಿ ನಿಂತು ಸಾಮೂಹಿಕ ಗೀತೆಗಳನ್ನು ಹಾಡಿದರು. ಮತ್ತು ಘೋಷಣೆಗಳನ್ನು ಕೂಗಿದರು.

ಸರಿಯಾಗಿ 10 ಗಂಟೆಗೆ ಧ್ವಜಾರೋಹಣ ನೆರವೇರಿಸಿದೆವು. ಇಂದು ಎನ್.ಪಿ.ಆರ್.ಸಿ. ಸಂಯೋಜಕರು, ಕೆಲವು ಪೋಷಕರು ಮತ್ತು ಪ್ರಧಾನ್‌ಜೀಯವರು ಬಂದಿದ್ದರು. ಧ್ವಜಾರೋಹಣದ ನಂತರ ಎಲ್ಲ ಮಕ್ಕಳನ್ನು ಒಂದು ಕಡೆ ಕೂರಿಸಿದೆ. ಮಕ್ಕಳು 8–10 ಗೀತೆಗಳನ್ನು, ನೃತ್ಯಗಳನ್ನು ಪ್ರಸ್ತುತಿಪಡಿಸಿದರು.

ಮಹಾತ್ಮ ಗಾಂಧೀಜಿ, ಲಾಲ್ ಬಹೂದ್ದೂರ್ ಶಾಸ್ತ್ರಿ ಮುಂತಾದ ದೇಶಭಕ್ತರ ಬಗ್ಗೆ ನಾನು ವಿವರಿಸಿ ಹೇಳಿದೆ ಮತ್ತು ಸಿಹಿ ವಿತರಣೆ ಮಾಡಿ 11–30ಕ್ಕೆ ಮಕ್ಕಳನ್ನು ಮನೆಗೆ ಬಿಟ್ಟೆ.

ಅನಂತರ ಎನ್.ಪಿ.ಆರ್.ಸಿ. ಸಂಯೋಜಕರು ಆಫೀಸ್ ರೂಮ್‌ನಲ್ಲಿ ಕುಳಿತು ಗುಣಮಟ್ಟದ ಪ್ರಮಾಣ ಪತ್ರ ತುಂಬಿದರು. ಮಕ್ಕಳಿಗೆ ಟೆಸ್ಟ್ ಕೊಡದೆಯೇ ಶೈಕ್ಷಣಿಕ ಪ್ರಗತಿಗೆ 'ಬಿ' ಶ್ರೇಣಿಯನ್ನೂ ಭೌತಿಕ ಸ್ಥಿತಿಗತಿಗೆ 'ಎ' ಶ್ರೇಣಿಯನ್ನೂ ಕೊಟ್ಟರು.

ಮನೆಗೆ ಹಿಂತಿರುಗಿ ಬಂದ ಮೇಲೆ ನಾನು ಅಲ್ಮೋರಾಕ್ಕೆ ಹೋಗಲು ತಯಾರಿ ನಡೆಸಿದೆ. ಪಠ್ಯಪುಸ್ತಕಗಳನ್ನು ಅವಲೋಕಿಸಿದೆ, ಸಾಮರ್ಥ್ಯ ಆಧಾರಿತ ಪ್ರಶ್ನೆಗಳ ಬಗ್ಗೆ ಆಲೋಚಿಸಿದೆ. ಜತೆಗೆ ಹಿಂದಿನ ಕಾರ್ಯಾಗಾರಗಳಲ್ಲಿ ಸಿದ್ಧಗೊಳಿಸಿದ್ದ ಪ್ರಶ್ನೆಗಳ ಮೇಲೂ ಕಣ್ಣಾಡಿಸಿದೆ.

ಇಂದು ನಾನು ಬೇಗ ಮಲಗಿದೆ. ರಾಜ್ಯ ಮಟ್ಟದ ಪ್ರಶ್ನೆಪತ್ರಿಕೆ ಮತ್ತು ನೀಲ ನಕಾಶೆ ಕಾರ್ಯಾಗಾರದಲ್ಲಿ ಪಾಲ್ಗೊಳ್ಳಲು ನಾಳೆ ನಾನು ಅಲ್ಮೋರಾಕ್ಕೆ ಹೋಗಬೇಕಾಗಿತ್ತು.

## 3 ರಿಂದ 10–ಅಕ್ಟೋಬರ್–2007

ದಿನಾಂಕ ಅಕ್ಟೋಬರ್ 3 ರಂದು ಮುಂಜಾನೆ ಮನೆಯಿಂದ ಅಲ್ಮೋರಾಕ್ಕೆ ಹೊರಟೆ. ಅಲ್ಮೋರಾದಲ್ಲಿ ಕಲಿಕಾ ಖಾತ್ರಿ ಯೋಜನೆಯಡಿಯಲ್ಲಿ ಆಯೋಜಿಸಿದ್ದ ಸಾಮರ್ಥ್ಯ ಆಧಾರಿತ ಪ್ರಶ್ನೆಪತ್ರಿಕೆ ಹಾಗೂ ನೀಲ ನಕಾಶೆ ತಯಾರಿಸುವ ಕಾರ್ಯಾಗಾರದಲ್ಲಿ ಪಾಲ್ಗೊಳ್ಳಬೇಕಾಗಿತ್ತು. ರಾತಲದಾರದಲ್ಲಿ ದಿನೇಶ್ ನೌಟಿಯಾಲರನ್ನು ಭೇಟಿಯಾದೆ. ಶ್ರೀನಗರವನ್ನು ದಾಟಿ ಕರ್ಣಪ್ರಯಾಗವನ್ನು ತಲುಪುವಷ್ಟರಲ್ಲಿ ರಾತ್ರಿಯಾಗಿತ್ತು. ಅಲ್ಲೇ ಹೋಟೆಲ್‌ನಲ್ಲಿ ತಂಗಿದೆವು. ಅಲ್ಲಿ ನೀಲ ನಕಾಶೆಯ ಬಗ್ಗೆ ಚರ್ಚಿಸಿದೆವು ಮತ್ತು ಸ್ವಲ್ಪ ಪೂರ್ವತಯಾರಿ ಮಾಡಿದೆವು. ಸುದೀರ್ಘ ಪ್ರಯಾಣದಿಂದ ಬಳಲಿದ್ದ ನಾವು 10 ಗಂಟೆಗೆ ಮಲಗಿದೆವು.



ಅಕ್ಟೋಬರ್ 4 ರಂದು ಬೆಳಿಗ್ಗೆ 7 ಗಂಟೆಗೆ ಕರ್ಣಪ್ರಯಾಗದಿಂದ ಹೊರಟು ಗ್ವಾಲ್ದಮ್, ಗರೂರ್ ಮತ್ತು ಕೌಸಾನಿಯನ್ನು ಹಾದು ಅಪರಾಹ್ನ 4 ಗಂಟೆಗೆ ಅಲ್ಮೋರಾ ತಲುಪಿದೆವು. ಅಲ್ಲಿ ಉಳಿದುಕೊಳ್ಳಲು ಸೇವಾನಿಧಿ ಸಂಸ್ಥೆಯಲ್ಲಿ ವ್ಯವಸ್ಥೆ ಮಾಡಲಾಗಿತ್ತು. ಸ್ವಲ್ಪ ಹೊತ್ತಿನಲ್ಲಿಯೇ ಡಯಟ್ ಪ್ರಾಂಶುಪಾಲರಾದ ಶ್ರೀ ಚೌಬೆರವರು ಮತ್ತು ಸೌರಭ್‌ರವರೂ ಆಗಮಿಸಿದರು. ಅವರೊಡನೆ ನಾಳಿನ ಕಾರ್ಯಾಗಾರದ ಬಗ್ಗೆ ಚರ್ಚಿಸಿದೆವು. ಊಟದ ವ್ಯವಸ್ಥೆಯನ್ನು ಡಯಟ್‌ನಲ್ಲಿ ಮಾಡಲಾಗಿತ್ತು. ಅದು ಸೇವಾನಿಧಿ ಸಂಸ್ಥೆಯಿಂದ 1.5 ಕಿ.ಮೀ. ದೂರವಿತ್ತು. ಅಪರಾಹ್ನ ನಾವೆಲ್ಲಾ ಸುತ್ತಾಡಿದೆವು ಮತ್ತು ಅಲ್ಮೋರಾದ ಲಾಲ್ ಬಜಾರ್‌ಗೆ ಭೇಟಿ ನೀಡಿದ್ದೆವು. ಅಕ್ಟೋಬರ್ 5ರಿಂದ 7ರ ವರೆಗೆ ನಾವು ನೀಲ ನಕಾಶೆ ತಯಾರಿಕಾ ಕಾರ್ಯಾಗಾರದಲ್ಲಿ ಪಾಲ್ಗೊಂಡಿದ್ದೆವು. ನಾನು ಹಿಂದಿ ಗುಂಪಿನಲ್ಲಿ ಕೆಲಸ ಮಾಡಿದೆ. ಗುಂಪಿನಲ್ಲಿ 8 ಜನರಿದ್ದರು. ಗುಂಪಿನ ನೇತೃತ್ವವನ್ನು ನನಗೇ ವಹಿಸಿದ್ದರು. ಈ ಮೂರು ದಿನಗಳ ಕಾಲ ಪ್ರತಿಯೊಬ್ಬರೂ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದರು ಮತ್ತು ಶ್ರದ್ಧೆಯಿಂದ ಕೆಲಸ ಮಾಡಿದರು.

ಅಕ್ಟೋಬರ್ 8 ರಂದು ಜಾಗೇಶ್ವರ್‌ದಲ್ಲಿ ಸುತ್ತಾಡಲು ಹೊರಟೆವು. ಜಾಗೇಶ್ವರದಲ್ಲಿ 8ನೇ ಮತ್ತು 11ನೇ ಶತಮಾನಗಳಿಗೆ ಸೇರಿದ ಆಕರ್ಷಕವಾದ ಮಂದಿರ ಸಮೂಹಗಳಿವೆ. ಇದೇ ಶೈಲಿ ಮತ್ತು ಪರಂಪರೆಯ ದೇವಾಲಯಗಳು ಉತ್ತರಕಾಶಿಯ ಲಾಖಾಮಂಡಲದಲ್ಲಿ ಕಂಡು ಬರುತ್ತವೆ. ಈ ದೇವಾಲಯಗಳು ಒಬ್ಬನೇ ರಾಜನಿಂದ ಅಥವಾ ರಾಜವಂಶದವರಿಂದ ಒಂದೇ ಕಾಲದಲ್ಲಿ ನಿರ್ಮಾಣಗೊಂಡಿವೆ ಎಂಬ ಪ್ರತೀತಿ ಇದೆ. ಲಾಖಾಮಂಡಲದಲ್ಲಿ ನಡೆದ ಇತ್ತೀಚಿನ ಉತ್ಖನನಗಳಿಂದ ಶಿವಲಿಂಗಗಳುಳ್ಳ ಅನೇಕ ಚಿಕ್ಕ ಚಿಕ್ಕ ದೇವಾಲಯಗಳು ಬೆಳಕಿಗೆ ಬಂದಿವೆ. ಈ ದೇವಾಲಯಗಳು ಜಾಗೇಶ್ವರದ ಪ್ರಾಂಗಣದಲ್ಲಿರುವ ಗುಡಿಗಳ ಪ್ರತಿರೂಪದಂತಿವೆ. ಜಾಗೇಶ್ವರ್‌ದಲ್ಲಿ ವಸ್ತು ಸಂಗ್ರಹಾಲಯಕ್ಕೆ ಭೇಟಿ ನೀಡಿದ್ದೆವು. ಇದನ್ನು ತುಂಬಾ ಚೆನ್ನಾಗಿ ನಿರ್ಮಿಸಿದ್ದಾರೆ ಮತ್ತು ಪ್ರಾಚೀನ ಕಾಲದ ಅನೇಕ ಮೂರ್ತಿಗಳು ಇಲ್ಲಿವೆ.

ಜಾಗೇಶ್ವರಕ್ಕೆ ಸುಮಾರು ಒಂದು ಕಿ.ಮೀ. ಮೊದಲೇ ಡಂಡೇಶ್ವರವಿದೆ. ಇಲ್ಲಿಯೂ ಒಂದು ಮಂದಿರ ಸಮೂಹವಿದೆ. ಇಲ್ಲಿನ ಮಂದಿರಗಳು ಜಾಗೇಶ್ವರದ ಮಂದಿರಗಳು ನಿರ್ಮಾಣವಾದ ಬಹಳ ಕಾಲದ ನಂತರ ನಿರ್ಮಾಣವಾದಂತೆ ಕಾಣುತ್ತವೆ. ಆದರೆ ವಾಸ್ತುಶಿಲ್ಪದಲ್ಲಿ ಜಾಗೇಶ್ವರದ ಮಂದಿರಗಳ ಪ್ರತಿರೂಪದಂತಿವೆ.

ಅಲ್ಲಿಂದ ಹಿಂತಿರುಗುವಾಗ ಮಾರ್ಗ ಮಧ್ಯದಲ್ಲಿ ಪ್ರಸಿದ್ಧ ಗೋಲು ದೇವರ ಮಂದಿರಕ್ಕೆ ಭೇಟಿ ನೀಡಿದೆವು. ಅಲ್ಲಿ ಭಕ್ತಾದಿಗಳ ಅಕ್ಷರಗಳನ್ನೊಳಗೊಂಡ ಸಾವಿರಾರು ಘಂಟೆಗಳು ತೂಗಾಡುತ್ತಿದ್ದವು. ಭಕ್ತರು ತಮ್ಮ ಇಚ್ಛೆಗಳನ್ನು ಬರೆದು ಹೀಗೆ ತೂಗು ಹಾಕಿದರೆ ಗೋಲು ದೇವರು ಅವರ ಬಯಕೆಗಳನ್ನು ಈಡೇರಿಸುತ್ತಾನೆ ಎಂದು ಹೇಳುತ್ತಾರೆ. ಗೋಲು ದೇವರು ವಾಸ್ತವದಲ್ಲಿ ಪಿಥೌರ್‌ಗಡದ ರಾಜನಾಗಿದ್ದನಂತೆ. ಆದರೆ ಈಗ ದೇವರಂತೆ ಪೂಜಿಸುತ್ತಾರೆ. ಅವನು ತನ್ನ ಆಡಳಿತಾವಧಿಯಲ್ಲಿ ನ್ಯಾಯಪ್ರಿಯ ರಾಜನಾಗಿದ್ದನಂತೆ. ಹಾಗಾಗಿ ಇಂದಿಗೂ ಅವನು ತಮಗೆ ನ್ಯಾಯ ಒದಗಿಸುತ್ತಾನೆ ಎಂಬುದು ಜನರ ನಂಬಿಕೆ. ಜಾಗೇಶ್ವರವನ್ನು ಸುತ್ತಿದ ನಂತರ ಸುಮಾರು 2–00 ಗಂಟೆಗೆ ಅಲ್ಮೋರಾಕ್ಕೆ ಹಿಂತಿರುಗಿದೆವು.

ಇಂದು ರಾತ್ರಿ 7 ಗಂಟೆಗೆ ಅಲ್ಮೋರಾದಿಂದ ಡೆಹ್ರಾಡೂನ್‌ಗೆ ಹೊರಟೆವು. ರಾತ್ರಿ ಕಾಠಗೋದಾಮ್‌ದಲ್ಲಿ ಕಮಾವು ಮಂಡಲ ವಿಕಾಸ ನಿಗಮದ ಬಂಗಲೆಯಲ್ಲಿ ಉಳಿದುಕೊಂಡೆವು. ಅಲ್ಮೋರಾದಿಂದ ಕಾಠಗೋದಾಮ್ ವರೆಗೆ ರಾತ್ರಿಯಲ್ಲೇ ಪ್ರಯಾಣಿಸಿದೆವು. ಕಾರಿನಲ್ಲಿ ಪ್ರಯಾಣಿಸುವಾಗ ನಾವು ಸಂಗೀತ ಕೇಳಿದೆವು ಮತ್ತು ಪ್ರಾಥಮಿಕ ಶಿಕ್ಷಣದ ಮಹತ್ವಪೂರ್ಣ ಅಂಶಗಳ ಕುರಿತು ಚರ್ಚಿಸಿದೆವು.

## ಅವಳು, ಬೇಕು ಎಂದಳು......

ಖುಷಿಯಾಯಿತು ನನಗೆ
ಬೇಕು ಎಂದಳಾಕೆ,
ಖುಷಿಯಾಯಿತು ನನಗೆ
ಬಹುದಿನಗಳಿಂದ ಬೇಡವೆನ್ನಲಿಲ್ಲಾಕೆ.

ಜರ್ಜರಿತಳಾಗಿಹೆನು
ಸಾಧ್ಯವಾಗದು ನನಗೆ,
ಎಲ್ಲವೂ ಕಠಿಣವಾಗಿವೆ
ಚೇತರಿಕೆ ಬಲುಕಷ್ಟ.

ನನ್ನ ಹಣೆಯಲಿ ಬರೆದಿಲ್ಲ
ಸಾಧಿಸಲಾರೆ ಏನನ್ನೂ,
ಇನ್ನೆಷ್ಟು ಕೇಳುವುದು
ಇಂಥ ಹೃದಯ ಬಿರಿವ ಮಾತುಗಳ.

ಇಲ್ಲ, ಎಂದಿಗೂ ಸಾಧ್ಯವಿಲ್ಲ,
ಬೇಡ, ಕಷ್ಟ,
ಇವು ಅವಳ ಬಾಳಿನ ಭಾಗವಾಗಿವೆ,
ಅವಳ ನೆಚ್ಚಿನ ನುಡಿಗಳಾಗಿವೆ.

ಇಂದು ಅವಳೆಂದಾಗ
ನಾ ಕಲಿಯಬೇಕು, ಓದಬೇಕು.
ಅಂತರಂಗದ ದನಿಯ ಗುನುಗುನಿಸಬೇಕು,
ಚಂದದ ಕವಿತೆಯ ಬರೆಯಬೇಕು.
ಎಲ್ಲೊ ಒಂದೆಡೆ ನನಗನಿಸಿತು
ನಾನವಳ ಬದುಕಿನ ಭಾಗವಾಗಿದ್ದೇನೆ !



**11 14–ಅಕ್ಟೋಬರ್–2007**

ಅಕ್ಟೋಬರ್ 11ರಿಂದ 14ರ ವರೆಗೆ ನಾನು ಮನೆಯಲ್ಲೇ ಇದ್ದೆ. ಅಲ್ಮೋರಾದಿಂದ ಹಿಂತಿರುಗಿ ಬಂದಾಗಿನಿಂದ ನನಗೆ ಹುಷಾರಿರಲಿಲ್ಲ. ಈ ನಾಲ್ಕು ದಿನಗಳಲ್ಲಿ ನಾನು ಪ್ರಕೃತಿ ಚಿಕಿತ್ಸೆಯನ್ನು ಪ್ರಯತ್ನಿಸಿದೆ. ನೇತಿ, ಕುಂಜರ ಕ್ರಿಯೆ, ಆವಿ ಸ್ನಾನ ಮತ್ತು ತೇವಯುಕ್ತ ಬ್ಯಾಂಡೇಜ್‌ಗಳನ್ನು ಉಪಯೋಗಿಸಿದೆ. ಇದರಿಂದ ನನಗೆ ತುಂಬಾ ಆರಾಮವೆನಿಸಿತು.

11 ಮತ್ತು 12ರಂದು ಮತದಾರರ ಪರಿಷ್ಕರಣೆಗಾಗಿ ಭರಕೋಟ್‌ಗೆ ಹೋದೆ. ಆದರೆ ಮನೆಗಳಲ್ಲಿ ಯಾರೂ ಇರಲಿಲ್ಲ. ಬಹುಶಃ ಅವರೆಲ್ಲಾ ಹೊಲಗಳಲ್ಲಿ ದುಡಿಯಲು ಹೋಗಿರಬೇಕು ಇಲ್ಲವೇ ದೂರದ ತಾಂಡಾಗಳಿಗೆ ಭಾಂಗ್(Hemp) ಬಿತ್ತಲು ಹೋಗಿರಬೇಕು. ಕಫಲ್ಟಾಣುವಿನಲ್ಲಿ ಚಂದನ್‌ಸಿಂಗ್ ಜತೆ ಕುಳಿತು ಮತದಾರರ ಪಟ್ಟಿಯಲ್ಲಿನ ಭಾವಚಿತ್ರಗಳನ್ನು ಗುರುತಿಸಿದೆ.

13 ಮತ್ತು 14 ರಂದು ಮನೆಯಲ್ಲೇ ಉಳಿದೆ. ದಿನ ಪತ್ರಿಕೆಗಳನ್ನು ಓದಿದೆ ಹಾಗೂ ಒಂದೆರೆಡು ಹಳೆ ಮಾಸಪತ್ರಿಕೆಗಳನ್ನು ತಿರುವಿ ಹಾಕಿದೆ. ಬಾಕಿ ಇದ್ದ ದಿನಚರಿಯನ್ನು ಪೂರ್ಣಗೊಳಿಸಿದೆ.

**15–ಅಕ್ಟೋಬರ್–2007**

ಸಿ.ಆರ್.ಸಿ.ಯಲ್ಲಿ ಮಾಸಿಕ ಸಭೆ ಮತ್ತು ಟಿ.ಎಲ್.ಎಮ್. ಮೇಳವಿದ್ದುದರಿಂದ ಇಂದು ಶಾಲೆಗೆ ಹೋಗಲಿಲ್ಲ. ಆದರೆ ಯಾರೂ ಟಿ.ಎಲ್.ಎಮ್. ತಯಾರಿಸಿಕೊಂಡು ಬಂದಿರಲಿಲ್ಲ. ಸಿ.ಆರ್.ಸಿ. ಸಂಯೋಜಕರು ಅಗತ್ಯ ಮಾಹಿತಿಗಳನ್ನು ಶಿಕ್ಷಕರಿಂದ ಪಡೆದುಕೊಂಡರು ಮತ್ತು ಹಲ್ ಚಲ್ ಮಾಸಪತ್ರಿಕೆ ಇತ್ಯಾದಿಗಳನ್ನು ವಿತರಿಸಿದರು.

ಸಭೆ 2 ಗಂಟೆಯವರೆಗೂ ನಡೆಯಿತು. ಮಧ್ಯಾಹ್ನದ ನಂತರ ಮನೆಯಲ್ಲೇ ಉಳಿದೆ. ಕೈತೋಟಮಾಡಿ ನೀರು ಹಾಕಿದೆ. ಪತ್ರಿಕೆಗಳನ್ನು ಓದಿದೆ ಮತ್ತು ಒಂದೆರಡು ಪತ್ರಗಳನ್ನು ಬರೆದೆ.

**16–ಅಕ್ಟೋಬರ್–2007**

9–30ಕ್ಕೆ ಶಾಲೆ ತಲುಪಿದೆ. 10 ಗಂಟೆಯವರೆಗೂ ಎಲ್ಲ ಮಕ್ಕಳ ನಿರೀಕ್ಷೆಯಲ್ಲಿ ಕಾದೆ. ಪ್ರಾರ್ಥನೆಯ ವೇಳೆಗೆ 28 ಮಕ್ಕಳು ಬಂದರು. ಅಡುಗೆಯಾಕೆ ಇನ್ನೂ ಬಂದಿರಲಿಲ್ಲ. ಇಂದೂ ಸಹ ನಾನು ಮತದಾರರ ಪಟ್ಟಿ ಪರಿಷ್ಕರಣೆಗಾಗಿ ಮನೆಮನೆ ಭೇಟಿಗೆ ಹೋಗಬೇಕಾಗಿದೆ. ಆದ್ದರಿಂದ ಸೂಚನಾ ಫಲಕದಲ್ಲಿ ನನ್ನ ದಿನದ ಕಾರ್ಯಕ್ರಮದ ಕುರಿತು ಬರೆದೆ. ಮಕ್ಕಳಿಗೆ ಎರಡೆರಡು ಬಿಸ್ಕೆಟ್ ಪ್ಯಾಕ್ ಕೊಟ್ಟು ಅವರಿಗೆ ರಜೆ ನೀಡಿದೆ. ಬಿ.ಎಲ್.ಓ. ಕಾರ್ಯದ ನಿಮಿತ್ತ ಸಾಟಿಯಾಲೀಧಾರ್‌ನ ಕಡೆಗೆ ಹೊರಟೆ. ಸಾಟಿಯಾಲೀಧಾರ್ ತಲುಪಿದಾಗ ಶ್ರೀ ಲಾಖೀರಾಮ್ ಚಾಚಾರವರು ತೀರಿಕೊಂಡಿರುವ ಸುದ್ದಿ ತಿಳಿಯಿತು. ಹಾಗಾಗಿ ಸೀದಾ ಅವರ ಮನೆಗೆ ಹೋದೆ. ಅವರ ಅಂತ್ಯ ಸಂಸ್ಕಾರ ಕ್ರಿಯೆಗಳಲ್ಲಿ ಭಾಗವಹಿಸಿದೆ.

ಕೇವಲ ಅಂತ್ಯ ಸಂಸ್ಕಾರದಲ್ಲಿ ಪಾಲ್ಗೊಳ್ಳುವುದಾಗಿದ್ದರೆ ನಾನು ಹೋಗುತ್ತಿರಲಿಲ್ಲ, ಆದರೆ ನಾನು ಮಕ್ಕಳಿಗೆ ರಜೆ ಕೊಟ್ಟಿದ್ದರಿಂದ ಹೋಗಬೇಕಾಯಿತು. ನನ್ನ ಬಿ.ಎಲ್.ಓ. ಕಾರ್ಯವನ್ನು ಒಂದು ದಿನ ಮುಂದೂಡಿದೆ. ಇಂದು ಶಾಲೆಗೆ ಬಿಡುವಾಗಿ ತುಂಬಾ ಬೇಸರವಾಯಿತು. ಪಾಪ, ಬಡಪಾಯಿ ಮಕ್ಕಳು ಯಾವುದೇ ಪ್ರತಿಕ್ರಿಯೆ ಇಲ್ಲದೆ ಪಾಠಚೀಲಗಳನ್ನು ಹೆಗಲಿಗೇರಿಸಿಕೊಂಡು ಹಿಂತಿರುಗಿದರು. ಅವರಿಗೆ ತಮ್ಮ ಹಕ್ಕುಗಳ ಬಗ್ಗೆ ಅರಿವಿದ್ದಿದ್ದರೆ ಖಂಡಿತವಾಗಿ ನನ್ನನ್ನು ಪ್ರಶ್ನಿಸುತ್ತಿದ್ದರು "ನಮ್ಮನ್ನು ಈ ರೀತಿ ಶೋಷಣೆಮಾಡುತ್ತಿರುವುದು ಏಕೆ?" "ನಮಗೆ ಶಾಲೆಯಲ್ಲಿ ಇಬ್ಬರು ಶಿಕ್ಷಕರನ್ನು ಹೊಂದುವ ಅಧಿಕಾರ ಇಲ್ಲವೇ?" ನನ್ನ ಮಕ್ಕಳು ರಜೆ ಘೋಷಿಸಿದಾಗ ಖುಷಿ ಪಡುವುದಿಲ್ಲ. ಏಕೆಂದರೆ ಇದು ಅವರಿಗೆ ಸಾಮಾನ್ಯವಾಗಿದೆ. ಈ ರೀತಿ ಪದೇ ಪದೇ ಮಾಡುವುದರಿಂದ ಮಕ್ಕಳು ಶಾಲೆಗೆ ಬರಲು ಇಷ್ಟಪಡುವುದಿಲ್ಲ ಎಂಬ ಅರಿವಿದೆ. ಮುಗ್ಧ ಮಕ್ಕಳು ನಿರಾಸೆಯಿಂದ ಮನೆಗೆ ಹೋಗುವುದನ್ನು ಅಸಹಾಯಕನಾಗಿ ನೋಡುತ್ತೇನೆ. ನನಗೂ ನನ್ನವೇ ಆದ ಇತಿಮಿತಿಗಳಿವೆ.

ನಾನು ಕೇವಲ ಒಬ್ಬ ಸರ್ಕಾರಿ ನೌಕರ. ಯಾವ ಕಾರ್ಯವನ್ನು ಸರ್ಕಾರ ಮಹತ್ವಪೂರ್ಣದ್ದೆಂದು ಪರಿಗಣಿಸುತ್ತದೆಯೋ ಆ ಕಾರ್ಯಕ್ಕೆ ಪ್ರಥಮ ಪ್ರಾಶಸ್ತ್ಯ ನೀಡಿ ಕೆಲಸ ಮಾಡಲು ನನಗೆ ತಿಳಿಸುತ್ತಾರೆ. ಸೆಪ್ಟೆಂಬರ್ 28ರಿಂದ ಪಠ್ವಾರಿರವರು ಅನೇಕ ಬಾರಿ ನಮ್ಮ ಶಾಲೆಗೆ ಭೇಟಿ ನೀಡಿದ್ದಾರೆ. ಪ್ರತಿ ಸಲ ಅವರು ಹೇಳುವುದು– "ಶಾಲೆ ಮುಚ್ಚಿದರೂ ಪರವಾಗಿಲ್ಲ ಮತದಾರರ ಪಟ್ಟಿ ಪರಿಷ್ಕರಣೆಯನ್ನು ಆದಷ್ಟು ಬೇಗ ಮುಗಿಸು. ಎಲ್ಲಿಯವರೆಗೂ ನೀನು ಬಿ.ಎಲ್.ಓ. ಆಗಿರುತ್ತೀಯೋ ಅಲ್ಲಿಯವರೆಗೂ ನೀನು ಚುನಾವಣಾ ಅಯೋಗದ ನೌಕರನಾಗಿರುತ್ತೀಯ. ಆದ್ದರಿಂದ ಏನೇ ಆದರೂ ಇದನ್ನು ಮೊದಲು ಪೂರ್ಣಗೊಳಿಸಬೇಕು". ಸ್ವತಃ ಎ.ಡಿ.ಎಮ್. (Assistant District Magistrate) ಸಾಹೇಬರೂ ಸಭೆಯಲ್ಲಿ ಇದೇ ಭಾವನೆಯನ್ನು ವ್ಯಕ್ತಪಡಿಸಿದರು.

ಏನೇ ಆದರೂ, ಇಂದಿನಿಂದ ಅಕ್ಟೋಬರ್ 31ರ ವರೆಗೆ ಶಾಲೆ ಕೆಲಸವನ್ನು ಮಾಡಲಾಗುವುದಿಲ್ಲ. ಈ ಅವಧಿಯಲ್ಲಿ ಇಲ್ಲಿ ಕಾರ್ಯ ನಿರ್ವಹಿಸಲು ಬದಲಿ ಶಿಕ್ಷಕರ ವ್ಯವಸ್ಥೆಯನ್ನು ಮಾಡಿಲ್ಲವಾದ್ದರಿಂದ ಶಾಲೆ ಅಲ್ಲಿಯವರೆಗೂ ಮುಚ್ಚಿರುತ್ತದೆ. ಭರಕೋಟದ ಜೂನಿಯರ್ ಹೈಸ್ಕೂಲ್‌ನಲ್ಲಿಯೂ ಒಬ್ಬ ಶಿಕ್ಷಕನಿಗೆ ಮತದಾರರ ಪಟ್ಟಿ ಪರಿಷ್ಕರಣೆ ಕಾರ್ಯ ನೀಡಲಾಗಿದೆ. ಆದರೆ ವ್ಯವಸ್ಥೆಯುಳ್ಳವರು ಔಪಚಾರಿಕವಾಗಿ ಕೆಲಸವನ್ನು ಪೂರ್ಣಗೊಳಿಸುತ್ತಾರೆ. ಇನ್ನು ಮಕ್ಕಳ ಸ್ಥಿತಿ 'ಪಾಲಿಗೆ ಬಂದದ್ದು ಪಂಚಾಮೃತ' ಎಂಬಂತಿರುತ್ತದೆ.

ಅಂತ್ಯ ಸಂಸ್ಕಾರ ಮುಗಿಸಿ ಮನೆ ತಲಪುವಷ್ಟರಲ್ಲಿ ಸಂಜೆ 5 ಗಂಟೆಯಾಗಿತ್ತು. ದಿನಪತ್ರಿಕೆಗಳನ್ನು ಓದಿ, ಕೈತೋಟವನ್ನು ಆರೈಕೆ ಮಾಡಿದೆ ಮತ್ತು ವಾಕಿಂಗ್‌ಗೆ ಹೋದೆ. ರಾತ್ರಿ 8 ಗಂಟೆಗೆ ಕರೆಂಟ್ ಬಂತು. ದಿನಚರಿ ಬರೆದು ಮಲಗಿದೆ.

### 17–ಅಕ್ಟೋಬರ್–2007

ಇಂದು 9–45ಕ್ಕೆ ಶಾಲೆ ತಲುಪಿದೆ ಮತ್ತು 11 ಗಂಟೆವರೆಗೂ ಅಲ್ಲೇ ಇದ್ದೆ. ಸುಮಾರು 25 ಮಕ್ಕಳು ಬಂದಿದ್ದರು. 10 ಗಂಟೆಗೆ ಪ್ರಾರ್ಥನೆ ಮಾಡಿಸಿದೆ. ಅಡುಗೆಯಾಕೆ ಇಂದು ಸಹ ಬರಲಿಲ್ಲ. ನಾನು ಮತದಾರರ ಪಟ್ಟಿ ಪರಿಷ್ಕರಣೆಗೆ ಹೋಗಬೇಕಾಗಿತ್ತು. ಸೂಚನಾ ಫಲಕದಲ್ಲಿ ಬರೆದು ರಜೆ ಘೋಷಿಸಿದೆ. ನಾಳೆಗೂ ರಜೆ ಕೊಟ್ಟೆ. ಮತ್ತೆ ಅದೇ ನೋವು, ಅದೇ ಅಸಹಾಯಕ ಭಾವ.

### 18–ಅಕ್ಟೋಬರ್–2007

ಇಂದು ಶಾಲೆಗೆ ಹೋದೆ. 11 ಗಂಟೆಯವರೆಗೂ ಶಾಲೆಯಲ್ಲಿದ್ದೆ. ಬಂದಿದ್ದ ಮಕ್ಕಳಿಗೆ ರಜೆ ಘೋಷಿಸಿದೆ. ನಂತರ ಮತದಾರರ ಪಟ್ಟಿ ಪರಿಷ್ಕರಣೆಗಾಗಿ ಲಾದೂಗೆ ಹೋದೆ. ವಿಮಲಳ ಸಹಾಯ ಪಡೆದೆ ಮತ್ತು ಎಲ್ಲ ಮತದಾರರ ಹೆಸರುಗಳನ್ನು ದೃಢೀಕರಿಸಿದೆ. ಯಾರೂ ತಮ್ಮ ಭಾವಚಿತ್ರಗಳನ್ನು ಕೊಡಲು ತಯಾರಿರಲಿಲ್ಲ. ಬಹುಪಾಲು ಮತದಾರರು ದುಡಿಮೆಗಾಗಿ ಹೊಲಗಳಿಗೆ ಹೋಗಿದ್ದರು. ವೃದ್ಧರು ಅಥವಾ ಮಕ್ಕಳೇ ಹೆಚ್ಚಾಗಿ ಮನೆಗಳಲ್ಲಿ ಸಿಗುತ್ತಿದ್ದಾರೆ. ಇದರಿಂದ ಪರಿಷ್ಕರಣೆ ಕಾರ್ಯ ವಿಳಂಬವಾಗುತ್ತಿದೆ. 2 ಗಂಟೆಯವರೆಗೂ ಹಳ್ಳಿಯಲ್ಲಿದ್ದೆ. ನಂತರ ಧೌಂತರಿಗೆ ಬಂದು ಅಲ್ಲಿಂದ ಉತ್ತರಕಾಶಿಗೆ ಹೋದೆ. ರಾತ್ರಿ ಆಶ್ರಮದಲ್ಲಿ ಉಳಿದುಕೊಂಡಿದ್ದೆ. ಘನಶ್ಯಾಮಜೀರವರ ಜತೆ ಹಲವಾರು ವಿಷಯಗಳನ್ನು ಚರ್ಚಿಸಿದೆ.



### 19,20,21–ಅಕ್ಟೋಬರ್–2007

19 ರಿಂದ 20 ರವರೆಗೆ ಅಷ್ಟಮಿ, ನವಮಿ ಪ್ರಯುಕ್ತ ರಜೆಯಿತ್ತು. 21 ರಂದು ವಿಜಯದಶಮಿ ಪ್ರಯುಕ್ತ ರಜೆಯಿತ್ತು. 18 ರಿಂದ 20ರ ವರೆಗೆ ಉತ್ತರಕಾಶಿಯಲ್ಲೆ ಇದ್ದೆ. ಕುಟೇತಿಯಲ್ಲಿ ಆಯೋಜಿಸಿದ್ದ ವಸ್ತು ಪ್ರದರ್ಶನಕ್ಕೆ ಸಹಾಯ ಮಾಡಿದೆ. 21ರ ಮುಂಜಾನೆ ಮನೆಗೆ ವಾಪಸಾದೆ. ಇಂದು ನಾನು ಡಿ.ಟಿ.ಹೆಚ್. ಸಂಪರ್ಕ ತೆಗೆದುಕೊಂಡೆ. ಅದರ ಪ್ರತಿನಿಧಿ ಬಾಲಕ ಮನೆಗೆ ಬಂದು ಜೋಡಿಸಿ ಸಂಪರ್ಕ ಕೊಟ್ಟ. ಅವನು ರೈಲು ತಪ್ಪಿಸಿಕೊಂಡಿದ್ದರಿಂದ ರಾತ್ರಿ ಅವನೂ ನನ್ನೊಡನೆ ತಂಗಿದ್ದ.

### 22–ಅಕ್ಟೋಬರ್–2007

ಇಂದು ನಾನು ಶಾಲೆಗೆ ಹೋದೆ. 11 ಗಂಟೆಯವರೆಗೂ ಅಲ್ಲೇ ಇದ್ದೆ. ನಂತರ ಲ್ವಾರ್ಕಾ ಗ್ರಾಮಕ್ಕೆ ಮತ್ತು ಥಾತಿ ಕಾಲೋನಿಗೆ ಹೋಗಿ ಮತದಾರರ ಪಟ್ಟಿ ಪರಿಷ್ಕರಣೆ ಮಾಡಿದೆ. ಮನೆಗೆ ವಾಪಸಾದ ಮೇಲೆ ಭಾವಚಿತ್ರ ಇಲ್ಲದ ಮತದಾರರ ಪಟ್ಟಿ ತಯಾರಿಸಿದೆ.

### 9–ಸೆಪ್ಟೆಂಬರ್–2008

ಇಂದು ಡಿ.ಎಮ್ (District Magistrate) ಬರುತ್ತಾರೆಂಬ ಗಾಳಿಸುದ್ದಿ ಹರಡಿತ್ತು. ಹೊಸ ಡಿ.ಎಮ್. ತುಂಬಾ ಕಟ್ಟುನಿಟ್ಟು ಮತ್ತು ಬಿಸಿ ಊಟದ ನಿರ್ವಹಣೆ ಸರಿಯಾಗಿ ಮಾಡದಿದ್ದ ಅನೇಕ ಶಿಕ್ಷಕ, ಶಿಕ್ಷಕಿಯರನ್ನು ಅಮಾನತುಗೊಳಿಸಿದ್ದರು ಅಥವಾ ಅವರ ವೇತನ ತಡೆ ಹಿಡಿದಿದ್ದರು. ಪಂಚಾಯ್ತಿ ಚುನಾವಣೆಗಳ ಸಮಯವಾದ್ದರಿಂದ ಅವರು ಬರುವ ಸಾಧ್ಯತೆಗಳು ಹೆಚ್ಚಾಗಿದ್ದವು. ನಾನು ಇಂದು 9 ಗಂಟೆಗೇ ಶಾಲೆ ತಲುಪಿದೆ. ಕಾರಣ ನಾನೂ ಸಹ ಸೆಪ್ಟಂಬರ್ 1ರಿಂದ ಅಕ್ಷರ ದಾಸೋಹದ ವಹಿ ಬರೆದಿರಲಿಲ್ಲ. ಏಕೆಂದರೆ ಸೆಪ್ಟಂಬರ್ 2 ರಿಂದ 7 ರವರೆಗೆ ಚುನಾವಣೆಯ ಕಾರ್ಯದ ನಿಮಿತ್ತ ನೌಗಾಂವ್‌ನಲ್ಲಿದ್ದೆ. ಶಾಲೆಗೆ ಹೋದ ತಕ್ಷಣ ಮಕ್ಕಳನ್ನು ಎಣಿಸಿ ಹಾಜರಾತಿ ವಹಿ ಪೂರ್ಣಗೊಳಿಸಿದೆ. ಅಷ್ಟರಲ್ಲಿ ಕೆಲವು ಮಕ್ಕಳು ಬಂದಿದ್ದರು. ನಮ್ಮ ಶಾಲೆಯಲ್ಲೇ ಮತಗಟ್ಟೆ ಇದ್ದುದರಿಂದ ಶಾಲೆಯ ಸುತ್ತ ಮುತ್ತ ಬೆಳೆದಿದ್ದ ಗಿಡಗಂಟಿ ಕಡಿಸಿದೆ, ತರಗತಿ ಕೋಣೆಗಳಲ್ಲಿ ಸಫಾಯಿ ಮಾಡಿಸಿದೆ, ಶೌಚಾಲಯಗಳನ್ನು ನಾನೇ ತೊಳೆದು ಸ್ವಚ್ಛ ಮಾಡಿದೆ ಮತ್ತು ಪೈಪ್‌ಲೈನ್ ದುರಸ್ತಿ ಮಾಡಿಸಿ ನಲ್ಲಿಗಳನ್ನು ವ್ಯವಸ್ಥಿತಗೊಳಿಸಿದೆ. ಅಡುಗೆಯಾಕೆಗೆ ಅಡುಗೆ ಕೋಣೆ ಸ್ವಚ್ಛಗೊಳಿಸುವಂತೆ ಹೇಳಿದೆ. ಇದೆಲ್ಲಾ ಕೆಲಸ ಮುಗಿಸುವಷ್ಟರಲ್ಲಿ 12 ಗಂಟೆಯಾಗಿತ್ತು. ಇಂದು ಕೇವಲ 10 ಮಕ್ಕಳು ಬಂದಿದ್ದರು. ಸೂರ್ಯನ ಬಿಸಿಲು ಇತ್ತೀಚೆಗೆ ಪ್ರಖರಗೊಳ್ಳುತ್ತಿದೆ. ಇದು ಭಾಂಗ್ ಬಿತ್ತುವ ಸಮಯ. ಹಾಗಾಗಿ ಅಕ್ಟೋಬರ್ ಮಧ್ಯದವರೆಗೂ ಮಕ್ಕಳ ಹಾಜರಾತಿ ತುಂಬಾ ಕಡಿಮೆಯಿರುತ್ತದೆ. ಶಾಲೆ ವಾತಾವರಣ ಮತ್ತು ದಾಖಲೆಗಳ ವಿಷಯದಲ್ಲಿ ನಾನು ನಿಶ್ಚಿಂತನಾಗಿದ್ದೆ. ಆದರೆ ಮಕ್ಕಳ ಹಾಜರಾತಿ ವಿಷಯದಲ್ಲಿ ನಾನು ಭಯಭೀತನಾಗಿದ್ದೆ. ಒಂದು ವೇಳೆ ಡಿ.ಎಮ್. ಸಾಹೇಬರೇನಾದರೂ ಇಷ್ಟು ಕಡಿಮೆ ಹಾಜರಾತಿ ನೋಡಿದ್ದರೆ ನನ್ನ ಶಾಲೆಯ ಉಳಿದ ದಿನಗಳ ಹಾಜರಾತಿಯನ್ನೂ ಸಂಶಯದಿಂದ ನೋಡುತ್ತಿದ್ದರು. ಶೈಕ್ಷಣಿಕ ಕಾರ್ಯಗಳನ್ನು ನೋಡುವ ಅಧಿಕಾರಿಗಳು ಕಡಿಮೆ. ಮಕ್ಕಳೊಡನೆ ಅಕ್ಕರೆಯಿಂದ ನಾಲ್ಕು ಮಾತನಾಡಲು ಅಥವಾ ಶಾಲಾ ಸಿಬ್ಬಂದಿಯೊಂದಿಗೆ ಅನೌಪಚಾರಿಕವಾಗಿ ನಾಲ್ಕು ಮಾತುಗಳನ್ನಾಡಲು ಅಧಿಕಾರಿಗಳು ಕಿಂಚಿತ್ ಆಸಕ್ತಿಯನ್ನೂ ತೋರುವುದಿಲ್ಲ. ಶಿಕ್ಷಕರು 'ಅಧಿಕಾರಿಗಳ ಭೇಟಿ' ಎಂದರೆ ಭಯಪಡಲು ಇದೂ ಒಂದು ಕಾರಣ.

2–00 ಗಂಟೆಗೆ ಪೋಲಿಂಗ್ ತಂಡದವರು ಬಂದರು. ಊಟದ ನಂತರ ಸುಮಾರು 1–30ಕ್ಕೆ ಮಕ್ಕಳನ್ನು ಮನೆಗೆ ಕಳುಹಿಸಿದೆ. ಡಿ.ಎಮ್. ಸಾಹೇಬರು ಬರಲಿಲ್ಲ. ನಾನು ಆರಾಮಾಗಿ ನಿಟ್ಟುಸಿರು ಬಿಟ್ಟೆ. ನಾನು ಪೋಲಿಂಗ್ ಪಾರ್ಟಿಯವರಿಗೆ ಅವಶ್ಯಕ ಸಾಮಗ್ರಿಗಳನ್ನು ನೀಡಿ. ಅವರಿಗೆ ಅಡುಗೆ ವ್ಯವಸ್ಥೆ ಮಾಡಿದೆ. ಶಾಲೆಯ ಬೀಗದ ಕೈಗಳನ್ನು ಅವರಿಗೆ ಒಪ್ಪಿಸಿ, 4 ಗಂಟೆ ವೇಳೆಗೆ ಮನೆಗೆ ಹಿಂತಿರುಗಿದೆ.

5–00 ಗಂಟೆಗೆ ಹಳ್ಳಿಗೆ ಹೋಗಿ ಗ್ರಾಮ ಪ್ರಧಾನರ ಅಭ್ಯರ್ಥಿಯ ಪರವಾಗಿ ಹಳ್ಳಿಯವರಲ್ಲಿ ಮತಯಾಚಿಸಿದೆ. ಮಧ್ಯ ರಾತ್ರಿಯವರೆಗೂ ಚುನಾವಣೆ ಪ್ರಚಾರದಲ್ಲೇ ಕಳೆದೆ. ಮಧ್ಯರಾತ್ರಿಯ ನಂತರ ಮಲಗಿದೆ.

### 10–ಸೆಪ್ಟೆಂಬರ್–2008

ಇಂದು ಮುಂಜಾನೆ 8 ರವರೆಗೆ ಮಲಗಿದೆ. ಪ್ರಾತಃಕಾಲದ ವಿಧಿಗಳನ್ನು ಮುಗಿಸಿದ ನಂತರ ನಾನು ಮತ ಚಲಾಯಿಸಲು ಹೋದೆ. ನಂತರ ಧೌಂತರಿಯ ನನ್ನ ಮನೆಗೆ ಹಿಂತಿರುಗಿದೆ. ದೂರವಾಣಿಯ ಮೂಲಕ ಶ್ರೀ ಸೌರಭ್ ಸರ್ ರವರನ್ನು ಮಾತನಾಡಿಸಿದೆ. ನಾನು ನನ್ನ ಬರವಣಿಗೆಗಳನ್ನು ಪೂರ್ಣಗೊಳಿಸಲು 15 ದಿನಗಳ ರಜೆ ಪಡೆಯಲು ಆಲೋಚಿಸುತ್ತಿದ್ದೇನೆ. ಇದನ್ನೇ ಸೌರಭ್ ಸರ್‌ಗೆ ತಿಳಿಸಿದೆ. ಅವರು ಅವರ ಬಳಿಗೇ ಹೋಗಿ ನನ್ನ ಲೇಖನ ಕಾರ್ಯವನ್ನು ಪೂರ್ಣಗೊಳಿಸಬಹುದೆಂದು ಹೇಳಿದರು. ನಾನು ಒಪ್ಪಿದೆ. ಬಹುಶಃ ನಾನು ಅವರಿರುವಲ್ಲಿಗೆ ಹೋದರೆ ನನ್ನ ಕಾರ್ಯವನ್ನು ಪೂರ್ಣಗೊಳಿಸಬಹುದು. ಈ ಮುಂಚೆಯೂ ಅವರೊಡನೆ ಇದ್ದು ಹಲವು ಲೇಖನಗಳನ್ನು ಬರೆದಿದ್ದೇನೆ. ಅವರ ಬಳಿ ಹೋಗುವುದರಿಂದ ನನಗೆ ಓದಲು ಸಾಕಷ್ಟು ಪುಸ್ತಕಗಳು ದೊರೆಯುತ್ತವೆ. ಹಗಲಲ್ಲಿ 'ಶಿಕ್ಷಕರಿಗೊಂದು ಪತ್ರ' ಪುಸ್ತಕದ ಮತ್ತಷ್ಟು ಪುಟಗಳನ್ನು ಓದಿದೆ. ರಾತ್ರಿ ದಿನಚರಿ ಬರೆದೆ. ಸ್ವಲ್ಪ ಹೊತ್ತು ಓದಿ, 11 ಗಂಟೆಗೆ ಮಲಗಿದೆ. ಇಂದು ಸಾಮಾನ್ಯ ದಿನವಾಗಿತ್ತು.

### 15,16–ಅಕ್ಟೋಬರ್–2008

ಈ ಎರಡು ದಿನ 'ಕಲಿಕಾ ಖಾತ್ರಿ ಯೋಜನೆ'ಯಡಿಯಲ್ಲಿ ಆಯೋಜಿಸಲಾಗಿದ್ದ 'ಹಿಮ್ಮಾಹಿತಿ ಕಾರ್ಯಾಗಾರ'ದಲ್ಲಿ ಪಾಲ್ಗೊಂಡಿದ್ದೆ. ಕಾರ್ಯಾಗಾರದಲ್ಲಿ ಶ್ರೀ ಕೆ.ಆರ್. ಶರ್ಮರವರ ಭೇಟಿಯಾಯಿತು. ಅವರ ಭೇಟಿ ನನ್ನಲ್ಲಿ ಹಲವಾರು ಪ್ರಶ್ನೆಗಳನ್ನು ಹುಟ್ಟುಹಾಕಿತು. ಸಾಮಾನ್ಯ ಶಿಕ್ಷಕರು ಯಾವುದೇ ಕಾರ್ಯಾಗಾರಗಳಲ್ಲಿ ಆಸಕ್ತಿಯಿಂದ ಪಾಲ್ಗೊಳ್ಳುವುದಿಲ್ಲ. ವಿಷಯದ ಕುರಿತು ಶಿಕ್ಷಕರ ಅಭಿಪ್ರಾಯಗಳನ್ನು ವ್ಯಕ್ತಪಡಿಸುವಂತೆ ಮಾಡಲು ಸಂಪನ್ಮೂಲ ವ್ಯಕ್ತಿಗಳು ಹೆಚ್ಚಾಗಿ ಮಾತನಾಡಬೇಕಾಗುತ್ತದೆ. ಅವರು ಶಿಕ್ಷಕರನ್ನು ಮಾತನಾಡುವಂತೆ ಪ್ರೇರೇಪಿಸಬೇಕಾಗುತ್ತದೆ. ಪ್ರತಿಭಾಗಿಗಳ ಮೌನ ಸಂಪನ್ಮೂಲ ವ್ಯಕ್ತಿಗಳಲ್ಲಿ ಗೊಂದಲವನ್ನು ಉಂಟು ಮಾಡುತ್ತದೆ. ಪ್ರತಿಭಾಗಿಗಳಲ್ಲಿ ಸ್ವತಂತ್ರ ಚಿಂತನೆ ಮಾಡುವಂತಹ ವಾತಾವರಣ ನಿರ್ಮಿಸುವ ಕಾರ್ಯ ತುಂಬಾ ಶ್ರಮದಾಯಕವಾದುದು.

ಈ ಕಾರ್ಯಾಗಾರದಿಂದ ನಾನು ತಿಳಿದುಕೊಂಡ ಅಂಶಗಳು :–

- ಮಕ್ಕಳ ತಪ್ಪುಗಳನ್ನು ತಪ್ಪು ಎಂದು ಭಾವಿಸಬಾರದು.
- ಒಂದು ಮಗು ನಮ್ಮ ಪ್ರಕಾರ ಸರಿಯಾದ ಉತ್ತರಗಳನ್ನು ನೀಡುತ್ತಿದ್ದರೆ ಆ ಮಗು ಆ ಸಮಸ್ಯೆ ಅಥವಾ ಪ್ರಶ್ನೆಯನ್ನು ಸರಿಯಾಗಿ ಅರ್ಥ ಮಾಡಿಕೊಂಡಿದೆ ಎಂದು ಸಂತುಷ್ಟರಾಗುತ್ತೇವೆ. ಇದನ್ನು ಹೊರತುಪಡಿಸಿ ಸರಿಯಾದ ಉತ್ತರದಿಂದ ಮಗುವಿನ ಬಗ್ಗೆ ಮತ್ತೇನೂ ತಿಳಿಯುವುದಿಲ್ಲ. ಅದೇ ರೀತಿ ಯಾವಾಗ ಮಗು ಪ್ರಶ್ನೆಗೆ ಉತ್ತರಿಸಲು ಪ್ರಯತ್ನಿಸುವುದಿಲ್ಲವೋ ಅಥವಾ ನಿರುತ್ತರವಾಗಿರುತ್ತದೋ ಆಗಲೂ ಮಗುವಿನ ಬಗ್ಗೆ ಹೆಚ್ಚಿಗೆ ತಿಳಿಯುವುದಿಲ್ಲ. ಆದರೆ ತಪ್ಪು ಉತ್ತರ ಅಥವಾ ಭಾಗಶಃ ಉತ್ತರ ನೀಡಿದರೆ ಮಗುವಿನ ಬಗ್ಗೆ ಸಾಕಷ್ಟು ತಿಳಿದುಕೊಳ್ಳಬಹುದು.



ಸಾಮಾನ್ಯವಾಗಿ ನಾವು ಮಕ್ಕಳ ತಪ್ಪು ಉತ್ತರಗಳಿಗೆ ಗಮನ ನೀಡುವುದೂ ಇಲ್ಲ ಮತ್ತು ಅವುಗಳನ್ನು ವಿಶ್ಲೇಷಿಸುವುದೂ ಇಲ್ಲ. ಆದರೆ ಮಕ್ಕಳ ತಪ್ಪು (ನಮ್ಮ ದೃಷ್ಟಿಯಲ್ಲಿ) ಉತ್ತರಗಳ ಕಡೆ ಗಮನಹರಿಸುವುದರಿಂದ ಮಗುವಿನ ಕುರಿತು ಸಾಕಷ್ಟು ಅಂಶಗಳನ್ನು ತಿಳಿದುಕೊಳ್ಳಬಹುದು.

### 17,18,19–ಅಕ್ಟೋಬರ್–2008

17 ರಂದು ಕರವಾ ಚೌತಿಯ ಪ್ರಯುಕ್ತ ರಜೆಯಿತ್ತು. 18 ರಂದು ಶಾಲೆಯ ಮತಗಟ್ಟೆಯಲ್ಲಿ ಮತದಾನ ನಡೆಯುತ್ತದೆ. ಹಾಗಾಗಿ ಶಾಲೆಗೆ ಹೋಗಿ ಪೋಲಿಂಗ್ ತಂಡಕ್ಕೆ ಬೇಕಾದ ಮೇಜು, ಕುರ್ಚಿ ಮುಂತಾದ ಅವಶ್ಯಕ ಸಾಮಗ್ರಿಗಳನ್ನು ವ್ಯವಸ್ಥೆ ಮಾಡಿ ಶಾಲೆಯ ಬೀಗದ ಕೈಗಳನ್ನು ಪಕ್ಕದ ಮನೆಯವರಿಗೆ ಕೊಟ್ಟು ಬಂದೆ.

18 ರಂದು ಗ್ರಾಮ ಪ್ರಧಾನರ ಚುನಾವಣೆಯಿತ್ತು. ನಾನು ಜಿ.ಐ.ಸಿ. ಕಮದ್‌ಗೆ ಹೋದೆ. ಜೂನಿಯರ್ ಹೈಸ್ಕೂಲ್, ಭರಕೋಟ್ ರವರಿಗೆ ನೀಲ ನಕಾಶೆ ತಯಾರಿ ಕುರಿತ ಕಾರ್ಯಾಗಾರಕ್ಕೆ ವ್ಯವಸ್ಥೆ ಮಾಡಿಕೊಡಲು ಆದೇಶವೊಂದನ್ನು ಪಡೆದುಕೊಂಡೆ. ಮುಖ್ಯೋಪಾಧ್ಯಾಯರು ಶಾಲೆಯಲ್ಲಿರಲಿಲ್ಲ. ಆದ್ದರಿಂದ ಅವರ ಮನೆಗೆ ಹೋಗಿ ಆದೇಶದ ಪ್ರತಿಯ ಮೇಲೆ ಸಹಿ ಪಡೆದುಕೊಂಡು ಬಂದೆ.

19 ಕ್ಕೆ ನೀಲ ನಕಾಶೆ ತಯಾರಿ ಕಾರ್ಯಾಗಾರದಲ್ಲಿ ಪಾಲ್ಗೊಳ್ಳಲು ಮನೆಯಿಂದ 8 ಗಂಟೆಗೆ ಹೊರಟೆ. ಸಂಜೆ 6 ಗಂಟೆಗೆ ಋಷಿಕೇಶ ತಲುಪಿದೆ. ರಾತ್ರಿ ಅಲ್ಲಿನ ಧರ್ಮಶಾಲೆಯಲ್ಲಿ ಉಳಿದುಕೊಂಡೆ.

### 26–ನವೆಂಬರ್–2008

**ಇಂದಿನಿಂದ ಭಟ್ಟರ ದಿನಚರಿಯ ಮುಂದಿನ ಎಲ್ಲಾ ಪುಟಗಳು ಖಾಲಿ ಇದ್ದವು. ಭಟ್ಟರ ನಿರೀಕ್ಷೆಯಲ್ಲಿ?!**

## ಹಿನ್ನುಡಿ

ಇತ್ತೀಚೆಗೆ ಶಿಕ್ಷಣ ಕ್ಷೇತ್ರವನ್ನು ನಾನಾ ಸಮಸ್ಯೆಗಳು ಕಾಡುತ್ತಿವೆ. ಗುಣಮಟ್ಟದ ಶಿಕ್ಷಣ ನೀಡುವ ಬಗ್ಗೆ ಸರ್ವ ಶಿಕ್ಷಣ ಅಭಿಯಾನದಡಿ ಅನೇಕ ಪ್ರಯೋಗಗಳು ನಡೆದಿವೆ. ಅನೇಕ ಶಿಕ್ಷಣ ಆಯೋಗಗಳು ಶಿಕ್ಷಣ ಕ್ಷೇತ್ರದ ಸಮಸ್ಯೆಗಳಿಗೆ ಪರಿಹಾರಗಳನ್ನು ಸೂಚಿಸಿದ್ದರೂ ಸಹಾ ನಿರೀಕ್ಷಿತ ಮಟ್ಟದ ಯಶಸ್ಸನ್ನು ಸಾಧಿಸಲು ಸಾಧ್ಯವಾಗಿಲ್ಲ.

ಈ ಎಲ್ಲಾ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸಿದ ಉತ್ತರಾಖಂಡ್ ರಾಜ್ಯದ ಗುಡ್ಡಗಾಡು ಪ್ರದೇಶದ ಒಂದು ಸಣ್ಣ ಹಳ್ಳಿಯ ಶಾಲೆಯ ಶಿಕ್ಷಕ ಹೇಮರಾಜ್ ಭಟ್ ಒರ್ವ ಶೈಕ್ಷಣಿಕ ಆವಧೂತನಂತೆ ಕಾಣುತ್ತಾರೆ. ಸರ್ಕಾರವಾಗಲೀ ಶಿಕ್ಷಣ ಕ್ಷೇತ್ರದ ಅಧಿಕಾರಿಗಳಾಗಲೀ ಹೇಮ್‌ರಾಜ್ ಭಟ್‌ರು ಅನುಭವಿಸಿದ ಸಮಸ್ಯೆಗಳನ್ನು, ದಿನಚರಿಯಲ್ಲಿ ದಾಖಲಿಸಿರುವ ಪರಿಹಾರಗಳನ್ನು ಗಮನಿಸುವಂತಾದರೆ ಅವರ ನಿಸ್ವಾರ್ಥ ಸೇವೆಗೆ ನಿಜವಾದ ಸ್ಮಾರಕ ನಿರ್ಮಿಸಿದಂತಾಗುತ್ತದೆ.

ಶಿಕ್ಷಣ ಕ್ಷೇತ್ರದ ಪ್ರಾಥಮಿಕ ಹಂತದ ಜಲ್ವಂತ ಸಮಸ್ಯೆಗಳಾದ ಬಹುವರ್ಗ ಬೋಧನೆ, ಗುರಿತಪ್ಪಿದ ತರಬೇತಿಗಳು, ಸರ್ಕಾರಿ ಸವಲತ್ತುಗಳನ್ನು ಸಕಾಲಕ್ಕೆ ತರಗತಿಗಳಿಗೆ ತಲುಪಿಸುವುದು, ಅಕ್ಷರದಾಸೋಹ, ಶಿಕ್ಷಕರು ಜನಗಣತಿ, ಮಕ್ಕಳ ಗಣತಿ, ಮತದಾರರ ಪಟ್ಟಿ ಪರಿಷ್ಕರಣೆ ಇತ್ಯಾದಿ ಚಟುವಟಿಕೆ ಪಾಲ್ಗೊಳ್ಳಬೇಕಾದ ಅನಿವಾರ್ಯತೆ, ವರ್ಗಾವಣೆ, ಸಕಾಲಕ್ಕೆ ಪಾಠ ಪ್ರವಚನಗಳನ್ನು ಮುಗಿಸಿಬೇಕೆಂಬ ಒತ್ತಡ, ತಮ್ಮ ಪೂರ್ಣಾವಧಿಯನ್ನು ತರಗತಿಗಳಿಗೆ ಮೀಸಲಿಡಲು ಸಾಧ್ಯವಾಗದ ಅಸಹಾಯಕತೆ, ಕುಡಿಯುವ ನೀರು, ಕಟ್ಟಡ ನಿರ್ಮಾಣ, ಶೌಚಾಲಯಗಳ ನಿರ್ವಹಣೆ, ಮಾನಸಿಕ ಮತ್ತು ದೈಹಿಕ ದಂಡನೆಯನ್ನು ತಡೆಗಟ್ಟುವುದು, ಮಾತೃಭಾಷಾ ಕಲಿಕೆಯೊಂದಿಗೆ ಆಂಗ್ಲ ಭಾಷೆಯನ್ನು ಬೋಧಿಸಬೇಕಾಗಿರುವುದು ಇಂತಹ ಅನೇಕ ಸಮಸ್ಯೆಗಳನ್ನು ಅನುಭವಿಸಿ, ಈ ಎಲ್ಲಾ ಸಮಸ್ಯೆಗಳಿಗೆ ಕಾರಣವಾದ ವ್ಯವಸ್ಥೆಯಲ್ಲಿನ ಲೋಪಗಳು, ಸ್ಪಂದನೆಯಿಲ್ಲದ ಅಧಿಕಾರಿಗಳು, ಅಸಮರ್ಪಕ ಸರ್ಕಾರದ ಯೋಜನೆಗಳ ಕುರಿತು ಮುಕ್ತವಾಗಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವ ಭಟ್ಟರು, ವ್ಯವಸ್ಥೆಯನ್ನು ದೂಷಿಸುವ ಬದಲು ತಾವು ಅನುಭವಿಸಿದ ಸಮಸ್ಯೆಗಳಿಗೆ ತಮಗಿರುವ ಪರಿಮಿತಿಗಳಲ್ಲಿ ಸೂಕ್ತ ಪರಿಹಾರ ಕಂಡುಕೊಳ್ಳುವ ಪ್ರಾಮಾಣಿಕ ಪ್ರಯತ್ನ ಮಾಡಿರುತ್ತಾರೆ.

ಶಿಕ್ಷಣ ಕ್ಷೇತ್ರದಲ್ಲಿ ದುಡಿಯುವ ಶಿಕ್ಷಕರು ಮತ್ತು ಅಧಿಕಾರಿಗಳು ಹೇಮರಾಜ್ ಭಟ್ಟರಂತೆ ಮಕ್ಕಳ ತಪ್ಪುಗಳಿಗೆ ಶಿಕ್ಷೆ ನೀಡುವ ಬದಲು ಅಕ್ಕರೆ ನೀಡುವ ಮೂಲಕ, ವ್ಯವಸ್ಥೆಯನ್ನು ದೂಷಿಸುವ ಬದಲು ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸುವ ಮೂಲಕ ಅವರು ತಮ್ಮ ದಿನಚರಿಯಲ್ಲಿ ಖಾಲಿ ಬಿಟ್ಟಿರುವ ಪುಟಗಳನ್ನು ಅರ್ಥಪೂರ್ಣವಾಗಿ ತುಂಬಲಿ ಎಂದು ಆಶಿಸೋಣ.

**– ಬಿ. ಜಿ. ಸತ್ಯಮೂರ್ತಿ**
**ಹಿರಿಯ ಸಾಹಿತಿಗಳು ಹಾಗೂ ಸಂಪಾದಕರು**
**ಬೃಹತ್ ಸಾಹಿತಿ ಮಾಹಿತಿ ಕೋಶ**

**ಬೆಂಗಳೂರು**
**ದಿನಾಂಕ: 06-09-2013**



## ಸಹೃದಯರ ಅನಿಸಿಕೆಗಳು

### ಮಕ್ಕಳ ಶಿಕ್ಷಣಕ್ಕಾಗಿ..... ಶಿಕ್ಷಕರಿಗೊಂದು ದಾರಿದೀಪ.....

"ಶಾಲೆ" "ಶಿಕ್ಷಣ" "ಹಕ್ಕು" ಈ ಮೂರು ಶಬ್ದಗಳ ಅರ್ಥ ಅನುಭವಿಸಲು ಅರ್ಥೈಸಲು "ಶಾಲಾ ಶಿಕ್ಷಕನ ಅಂತರಾಳದ ನುಡಿಗಳು" ಪುಸ್ತಕ ತುಂಬಾ ಸಹಾಯವಾಗುತ್ತದೆ. "ಶಾಲೆ" ಮತ್ತು ಶಾಲೆಯಲ್ಲಿ ನಡೆಯಬೇಕಾದ ಚಟುವಟಕೆಗಳು ತನ್ಮೂಲಕ "ಮಗು", "ಮಕ್ಕಳು" ಕಲಿಯಬೇಕಾದ "ಸಾಮರ್ಥ್ಯ"ದ ಬಗ್ಗೆ ಅರಿಯಲು ಹೇಮರಾಜ್ ಭಟ್‌ರವರು ನಡೆಸಿದ ಪ್ರಯತ್ನ, ದಿನನಿತ್ಯದ ಹುಡುಕಾಟಗಳನ್ನು ದಾಖಲಿಸಿರುವುದರಿಂದ ನಮಗೆ ಮತ್ತು ಶಿಕ್ಷಕರಿಗೆ ಉತ್ತಮ ಸಾಧನ ದೊರಕಿದಂತಾಗಿದೆ. ಇದು ಕೇವಲ ಶಿಕ್ಷಕರಿಗೆ ಮಾತ್ರವಲ್ಲದೆ ಮಕ್ಕಳೊಂದಿಗೆ ಇರುವ ಪ್ರತಿಯೊಬ್ಬ ನಾಗರಿಕರಿಗೆ ಸಹಾಯವಾಗುವ ಅಸ್ತ್ರ. ಮಗು ಕಲಿಯಬೇಕಾದ ಸಾಮರ್ಥ್ಯದ ಬಗ್ಗೆ ಭಟ್ಟರಿಗೆ ಇದ್ದ ಕಾಳಜಿ, ಅದಕ್ಕವರು ಮಾಡಿದ ವಿವಿಧ ಕಾರ್ಯತಂತ್ರದ ಕ್ರಮಗಳು, ಅನುಸರಿಸಿದ ವಿಧಾನಗಳು, ನಡೆಸಿದ ಹೋರಾಟ, ಸಹಿಸಿದ ನೋವುಗಳು, ಇಲಾಖೆಗಳ ಉಲ್ಲಂಘನೆಗಳನ್ನು ನೇರ ಪ್ರಶ್ನಿಸುತ್ತಾ ಒಂದಿಷ್ಟು ಸಹಿಸುತ್ತಾ ತಾವು ಮಕ್ಕಳಿಗೆ ಒದಗಿಸಬೇಕಾದ ನ್ಯಾಯ ಮತ್ತು ಸಾಮರ್ಥ್ಯವನ್ನು ನೀಡುತ್ತಾ ಬಂದಿರುವ ಪ್ರಕ್ರಿಯೆ ಒಂದು ಸಾಧನೆಯೇ ಸರಿ. ಇಂದಿನ ಎಲ್ಲಾ ಶಿಕ್ಷಕರಿಗೆ ಅವರ ದಿನಚರಿಗೆ, ಅವರು ಮಾಡಬೇಕಾದ ಕೆಲಸಗಳಿಗೆ ಅತ್ಯಂತ ಉತ್ತಮ ಕೃತಿ.

ಈ ಹೊತ್ತಿಗೆಯನ್ನು ಓದುವಾಗ ನಿಜವಾಗಿ ಮಕ್ಕಳ ಹಕ್ಕನ್ನು ನಿಜರೂಪದಲ್ಲಿ ಅನುಷ್ಠಾನ ಮಾಡುತ್ತಿರುವ ಬಗ್ಗೆ ಹಾಗೂ ಮಕ್ಕಳು ಅದನ್ನು ಅನುಭವಿಸುತ್ತಿರುವ ಭಾವ ಬಂತು. ಹಾಗೂ ಮಕ್ಕಳ ಹಕ್ಕಿನ ನಿಜರೂಪ ಹಾಗೂ ಸಾಮರ್ಥ್ಯ ಆಧಾರಿತ ಕಲಿಕೆಯ ಅಧ್ಯಯನದಂತೆ ಕಾಣುತ್ತದೆ. "ಶಿಕ್ಷಣ" ಕೇವಲ ಅಂಕಗಳಿಸುವುದಕ್ಕಾಗಿ ಅಲ್ಲದೆ ಅಭಿವೃದ್ಧಿಗಾಗಿ ಎಂಬ ಅಂಶ ಈ ಕೃತಿಯಲ್ಲಿ ಸ್ಪಷ್ಟವಾಗಿ ಅರಿಯುತ್ತದೆ. ಪ್ರತಿಯೊಬ್ಬ ತಂದೆ, ತಾಯಿ, ಶಿಕ್ಷಕರು, ಓದಲೇ ಬೇಕಾದ ಕೃತಿ. "ಶಿಕ್ಷಣ"ದ ಪರಿಣಾಮವನ್ನು ದಾಖಲಿಸುತ್ತಾ ಹೋಗಿ ಅದರ ಪರಿಣಾಮ ಮಗುವಿಗೆ ಮತ್ತು ಸಮಾಜಕ್ಕೆ ಆಗುವ ಲಾಭದ ಬಗ್ಗೆ ಎಚ್ಚರಿಸಿರುವುದು ನಿಜಕ್ಕೂ ಎಲ್ಲರೂ ಯೋಚಿಸಲೇ ಬೇಕಾದ ಅಂಶ. ಮಕ್ಕಳ ಅಭಿವೃದ್ಧಿಯಲ್ಲಿ ಶಿಕ್ಷಕರು, ಅವರ ದಿನಚರಿ, ಕಾಳಜಿ, ಪ್ರಾಮಾಣಿಕತೆಯನ್ನು ನಿರಂತರ ಪ್ರಶ್ನಿಸುತ್ತಾ ಹೋಗುವ ಕೃತಿ ಇದಾಗಿದೆ. ಪ್ರತಿಯೊಬ್ಬ ಶಿಕ್ಷಕರು ಈ ಕೃತಿಯನ್ನು ಓದುವುದೇ ಒಂದು ಉತ್ತಮ ಬದಲಾವಣೆ, ಅದೇ ಈ ಪುಸ್ತಕ ಸಮಾಜಕ್ಕೆ ನೀಡುತ್ತಿರುವ ಕೊಡುಗೆ.

**– ಕೆ. ರಾಘವೇಂದ್ರ ಭಟ್,**
ಸಂಯೋಜನಾಧಿಕಾರಿಗಳು,
ಯುನಿಸೆಫ್ "ಮಕ್ಕಳ ಸಂರಕ್ಷಣಾ" ಯೋಜನೆ,
ಜಿಲ್ಲಾಧಿಕಾರಿಗಳ ಕಛೇರಿ, ರಾಯಚೂರು

Teacher is king of himself but servant of mankind ಎಂಬುದರ ಸಾಕ್ಷಾತ್ಕಾರವೇ ಹೇಮ್‌ರಾಜ್ ಭಟ್ ಜೀವನಗಾಥೆ. ಮನುಕುಲದ ಉನ್ನತಿಯ ಅಡಿಪಾಯವೇ ಶಿಕ್ಷಣ. ಶಿಕ್ಷಣದ ಔನ್ನತ್ಯದ ಸೂತ್ರದಾರನಾದ ಪ್ರಾಥಮಿಕ ಶಾಲಾ ಶಿಕ್ಷಕನ ಪಾತ್ರ ಹಿರಿದು. ಆದರೆ ವಿದ್ಯಾರ್ಥಿಗಳು ಸಾಧನೆಯ ಗದ್ದುಗೆ ಏರಿದಾಗ ಶಿಕ್ಷಕ ಪಾತ್ರವು ಗೌಣವಾಗಿ ಬಿಡುವುದು ಸರ್ವೇ ಸಾಮಾನ್ಯ. ಈ ಕೃತಿಯಲ್ಲಿ ದುರ್ಗಮದಟ್ಟಡವಿ, ಗಿರಿಕಂದರಗಳಲ್ಲಿ, ಹಿಮಚ್ಛಾದಿತ ಪ್ರದೇಶಗಳಲ್ಲಿ ಮೂಲ ಸೌಕರ್ಯದ ಕೊರತೆಯ ನಡುವೆ ಸದ್ದಿಲ್ಲದೆ ಕಾಯಕದಲ್ಲಿ ನಿರತರಾಗಿ ತಪಗೈವ ಭಾರತದ ಅಸಂಖ್ಯಾತ ಶಿಕ್ಷಕರ ನೋವು ನಲಿವು ಪ್ರತಿಬಿಂಬಿತವಾಗಿದೆ. ಶಿಕ್ಷಕರಾದ ನಾವೆಲ್ಲ ನಿತ್ಯ ಜೀವನದಲ್ಲಿ ಎದುರಿಸುತ್ತಿರುವ ಕಲಿಕಾ ಸಂಬಂಧಿ ಸವಾಲುಗಳು, ವ್ಯವಸ್ಥೆಯಲ್ಲಿನ ಬದಲಾವಣೆಯೆಡೆಗೆ ನಮ್ಮೆಲ್ಲರ ತುಡಿಯುವ ಮನೋಧೋರಣೆ, ಮಾಡುವ ಪ್ರಯತ್ನ, ಎದುರಾಗುವ ಸಮಸ್ಯೆಗಳಿಗೆ ದಿಟ್ಟ ಉತ್ತರದ ಅಭಿವ್ಯಕ್ತತೆ ಇಲ್ಲಿದೆ. ಪ್ರವಾಹದ ಎದುರು ಈಜುವ ಛಾತಿಗೆ ಹೇಮ್‌ರಾಜ್ ಭಟ್‌ರ ಮೀನುಗಳ ಕವನವೇ ಸಾಕ್ಷಿ. ಸಮಕಾಲೀನ ಶಿಕ್ಷಕರ ಕುರಿತು ಅವರ ಕಾಳಜಿ, ಸ್ವೀಕಾರ ಗುಣ ನಮ್ಮೆಲ್ಲರಿಗೂ ಮಾದರಿ. ಶಿಕ್ಷಣ ವ್ಯವಸ್ಥೆಯ ನವ ನಿರ್ಮಾಣದ ದಿಟ್ಟ ಹೋರಾಟಗಾರನ ಹೋರಾಟ ವಿಧಿಯ ಕ್ರೂರ ಹೊಡೆತಕ್ಕೆ ಸಿಕ್ಕಿ ವಿಚ್ಛಿನ್ನಗೊಂಡದ್ದು ಮಾತ್ರ ಖೇದನೀಯ. ಶಿಕ್ಷಕನಾದ ನನಗೆ ನನ್ನ ಶಾಲಾ ವಾತಾವರಣದ ಸೀಮಿತ ವ್ಯಾಪ್ತಿ ಮೀರಿ ನವನವೀನ ಕಲಿತಾನುಭವ ಸೃಷ್ಟಿಸಿ ಸವಾಲುಗಳನ್ನು ಎದುರಿಸುವ ಅದಮ್ಯ ಉತ್ಸಾಹ ಪುಟಿದೇಳುವಂತೆ ಮಾಡಿದ ಸ್ಫೂರ್ತಿ ಚಿಲುಮೆ ಈ ಪುಸ್ತಕ.

**– ರಾಜೇಶ್.ಎಸ್,**
ಸಹ ಶಿಕ್ಷಕರು. ಸ.ಕಿ.ಪ್ರಾ.ಶಾಲೆ, ಪಂಚನಹಳ್ಳಿ,
ಗುಂಡ್ಲುಪೇಟೆ ತಾಲ್ಲೂಕು,
ಚಾಮರಾಜನಗರ.

ಹೇಮರಾಜ್ ಭಟ್ಟರ ಶಾಲಾ ಶಿಕ್ಷಕನ ಅಂತರಾಳದ ನುಡಿಗಳು ಓದುಗನ ಮನಮುಟ್ಟುವಂತಿದೆ. ಅವರು ಬರೆದ ದಿನಚರಿ ನಿತ್ಯದ ಬದುಕಿನ ವಾಸ್ತವ ಚಿತ್ರಣ ಎಂಬುದರಲ್ಲಿ ಸಂಶಯವಿಲ್ಲ. ಓರ್ವ ಶಿಕ್ಷಕನಾಗಿ ಕಾರ್ಯನಿರ್ವಹಿಸಿದ ಅವರ ಅನುಭವ ಹಾಗೂ ವೃತ್ತಿಯನ್ನು ಇಷ್ಟಪಡುವ ಪ್ರಕ್ರಿಯೆ ನನಗೆ ಮುದ ನೀಡಿತು. ಈ ಪುಸ್ತಕದಲ್ಲಿ ಹೃದಯಕ್ಕೆ ಹತ್ತಿರವಾದ ವಿಚಾರಗಳಿವೆ. ಅದು ನನ್ನ ಹಲವು ಕಾರ್ಯಗಳಿಗೆ ಪ್ರಚೋದನೆ ನೀಡಿತು ಮತ್ತು ಇದು ನನ್ನ ಕಲಿಕೆಯ ಹೊಸ ಹೊಳವು ಕೂಡಾ. ಅದ್ದರಿಂದ ಈ ಪುಸ್ತಕ ನನ್ನ ಪ್ರಕಾರ ಮಹತ್ತರವಾದ ಸ್ಥಾನ ಪಡೆದಿದೆ.

ನನಗೊಂದು ಆಶ್ಚರ್ಯದ ಸಂಗತಿಯೆಂದರೆ ನಾನು ಕನ್ನಡದಲ್ಲಿ ಈ ದಿನಚರಿ ಓದುವಾಗ ಕನ್ನಡದಲ್ಲಿಯೇ ಬರೆದಂತಿತ್ತು. ನನಗೆ ಎಲ್ಲಿಯೂ ಕೂಡಾ ಅನುವಾದ ಎಂದೆನಿಸಲೇ ಇಲ್ಲ, ಇಷ್ಟೊಂದು ಅರ್ಥವತ್ತಾಗಿ ಅನುವಾದಿಸಿದವರಿಗೆ ನಾನು ಕೃತಜ್ಞ, ಈ ಪುಸ್ತಕ ಓದಿದ ಮೇಲೆ ದೇಶದ ಶಿಕ್ಷಕರು, ಶೈಕ್ಷಣಿಕ ಅಧಿಕಾರಿಗಳು ಮತ್ತು ಶಿಕ್ಷಣ ಪ್ರೇಮಿಗಳು ಓದಲೇ ಬೇಕಾದ ಪುಸ್ತಕ ಎಂದು ನನಗೆ ಅನಿಸಿತು.

ನನಗೆ ಹೆಮ್ಮೆಯ ವಿಷಯವೆಂದರೆ ನಾನು ಅವರ ಜೊತೆಗೆ ಕಾರ್ಯನಿರ್ವಹಿಸಿದ್ದು, ಅವರು ಇಂದು ನಮ್ಮೊಂದಿಗೆ ಇಲ್ಲದಿರುವುದು ವಿಷಾದನೀಯ.

**– ಉಮಾಶಂಕರ್ ಪೆರಿಯೋಡಿ**
ಮುಖ್ಯಸ್ಥರು, ಈಶಾನ್ಯ ಕರ್ನಾಟಕ
ಅಜೀಮ್ ಪ್ರೇಮ್‌ಜೀ ಫೌಂಡೇಷನ್, ಗುಲ್ಬರ್ಗಾ

ಇದೊಂದು ನೈಜ ಶಿಕ್ಷಣ ವ್ಯವಸ್ಥೆಯನ್ನು ಬಿಂಬಿಸುತ್ತದೆ. ಸಾಮಾನ್ಯ ಶಿಕ್ಷಕರೊಬ್ಬರು ತಮ್ಮ ದಿನನಿತ್ಯದ ಸನ್ನಿವೇಶನ್ನು ಎಳೆ ಎಳೆಯಾಗಿ ಬಿಚ್ಚಿಡುತ್ತಾ ಹೋಗುತ್ತಾರೆ. ಏಕೋಪಾಧ್ಯಾಯ ಶಾಲೆಯಲ್ಲಿ ಇರುವಂತಹ ಕೆಲಸದ ಒತ್ತಡಗಳು, ಮಾನಸಿಕ ತೊಳಲಾಟಗಳು, ವ್ಯವಸ್ಥೆಯಲ್ಲಿನ ಬದಲಾವಣೆಗಳು ಎಲ್ಲದರ ಜೊತೆಗೆ ಮಕ್ಕಳ ಕಲಿಕೆಗಾಗಿ ಶ್ರಮ ಪಡುವ ಶಿಕ್ಷಕರೊಬ್ಬರ ಪ್ರಾಮಾಣಿಕ ಪ್ರಯತ್ನವೇ ಶಾಲಾ ಶಿಕ್ಷಕನ ಅಂತರಾಳದ ನುಡಿಗಳು.

**– ವೈಶಾಲಿ ಎಮ್ ಅನಿ,**
ಸದಸ್ಯರು
ಅಜೀಮ್ ಪ್ರೇಮ್‌ಜೀ ಫೌಂಡೇಷನ್
ಜಿಲ್ಲಾ ಸಂಸ್ಥೆ, ಮಂಡ್ಯ

**ವಿಜ್ಞಾನ ಶಾಸ್ತ್ರ ಕಲೆ ಕಾವ್ಯ ವಿದ್ಯೆಗಳೆಲ್ಲ ಧನ್ಯತೆಯ ಬೆದಕಾಟ– ಮಂಕುತಿಮ್ಮ**

ಬಹುಶಃ ನನಗೆ ಈ ಪುಸ್ತಕ ಓದುವಾಗ ಜೀವನದ ಧನ್ಯತೆಯ ಬೆದಕಾಟದಲ್ಲಿ ತೊಡಗಿದ ಒಬ್ಬ ವ್ಯಕ್ತಿಯ ಪರಿಚಯವಾಯಿತೇನೋ. ನನಗೆ ನಿಜವಾಗಿಯೂ ಆಶ್ಚರ್ಯವೆನಿಸಿದ ಸಂಗತಿಯೆಂದರೆ ಒಬ್ಬ ಸಾಮನ್ಯ ಶಿಕ್ಷಕ ತನ್ನ ವೃತ್ತಿಜೀವನದಲ್ಲಿ ಏನೆಲ್ಲಾ ತಾಕಲಾಟ ಪೀಕಲಾಟವನ್ನು ಎದುರಿಸಬೇಕಾಗುತ್ತದೆ ಹಾಗೂ ಈ ಸಂಗತಿಗಳ ನಡುವೆಯೇ ಹೇಗೆ ಶಿಕ್ಷಕ ತನ್ನ ವೈಯುಕ್ತಿಕ ವೃತ್ತಿಜೀವನದಲ್ಲಿ ಉತ್ಕೃಷ್ಟತೆಯನ್ನು ಸಾಧಿಸುತ್ತಾನೆ. ಇವೆಲ್ಲವನ್ನು ಈ ಪುಸ್ತಕ ಅಮೂಲಾಗ್ರವಾಗಿ ಶೋಧಿಸಿದೆ ಎಂದರೆ ತಪ್ಪಾಗಲಾರದು. ಗುರಿ, ಬದ್ಧತೆ, ಆದರ್ಶಗಳ ವಿಷಯಗಳಲ್ಲಿ ಎಂದೂ ರಾಜಿಮಾಡಿಕೊಳ್ಳದೆ ತನ್ನ ಜೀವನವನ್ನು ಇತರರರಿಗೆ ಮಾದರಿಯಾಗಿಸಿ ಕೊಂಡ ಹೇಮರಾಜ ಭಟ್ಟರಿಗೆ ಧನ್ಯವಾದಗಳು. ಪುಸ್ತಕ ಕುರಿತ ನನ್ನ ಸದಾಶಯವೇನೆಂದರೆ ಪುಸ್ತಕ ವ್ಯಕ್ತಿಚಿತ್ರದ ರೂಪದಲ್ಲಿ ಬಂದರೆ ಇನ್ನೂ ಮನಮುಟ್ಟುವಂತಿರುತ್ತದೆ.

**– ನಾಗಾನಂದ ಜಿ. ವಿ.**
ಸದಸ್ಯರು,
ಅಜೀಮ್ ಪ್ರೇಮ್‌ಜೀ ಫೌಂಡೇಷನ್, ಮಂಡ್ಯ



ಕರ್ತವ್ಯದ ಕರೆ ಕೆಲವೊಮ್ಮೆ ಅನಿವಾರ್ಯದ ಹೊರೆಯಾಗಿ ಬಿಡುತ್ತದೆ. ಆದರೆ ಆ ಅನಿವಾರ್ಯಗಳೇ ಅತಿಯಾಗಿ ಬಿಟ್ಟಾಗ ಕರ್ತವ್ಯದ, ಕಾಯಕದ ಮೂಲೋದ್ದೇಶವೇ ಮರೆತು ಹೋಗಿ ಅನಿವಾರ್ಯಗಳೇ ವ್ಯವಸ್ಥೆಯ ಭಾಗವಾಗಿ ಬಿಡುತ್ತದೆ. ವಿದ್ಯಾರ್ಥಿಗಳ ವಿವಿಧ ಭಾಗಗಳ ನಡುವೆ ಶಿಕ್ಷಣ ಭಾಗ್ಯವೇ ಕ್ಷೀಣವಾಗಿ ಬಿಟ್ಟರೆ ಅದಕ್ಕಿಂತಾ ದೊಡ್ಡ ದುರಂತ ಇನ್ನೊಂದಿಲ್ಲ. ಇಂಥಾ ಅನಿವಾರ್ಯಗಳ ಆಚರಣೆಯ ನಡುವೆಯೂ ಶಿಕ್ಷಣದ, ಶಿಕ್ಷಕರ ಗೌರವವನ್ನು ಹೆಚ್ಚಿಸಿದ ದಿವಂಗತ ಹೇಮರಾಜ್‌ರ ಅಧ್ಯಯನ, ಅಧ್ಯಾಪನಗಳನ್ನೊಳಗೊಂಡ ಶಿಕ್ಷಣ ನಿಷ್ಠೆಯು ನಿಜಕ್ಕೂ ಸ್ತುತ್ಯರ್ಹ ಹಾಗೂ ಅನುಕರಣಾರ್ಹ. ವಾಸ್ತವದಲ್ಲಿ ಪ್ರತಿ ಶಿಕ್ಷಕನ ಕೈಪಿಡಿಯಂತಿರುವ ಈ "ಅಂತರಾಳದ ನುಡಿಗಳು" ಮರು ಮುದ್ರಣಗೊಳ್ಳುತ್ತಿರುವುದಂತೂ ಅಧ್ಯಯನಶೀಲರ, ಅಧ್ಯಾಪನಾಸಕ್ತರ ಪ್ರಾಮಾಣಿಕತೆಯ ಫಲಶೃತಿಯೆನ್ನುವುದರಲ್ಲಿ ಆಶ್ಚರ್ಯವಿಲ್ಲ. "ಅಯ್ಯೋ ಇಷ್ಟೇನೇ" ಎಂದು ಅಂದು ಕೊಂಡು ಈ ಕಿರುಹೊತ್ತಿಗೆಯನ್ನು ಓದಲು ಪ್ರಾರಂಭಿಸುವ ಓದುಗನು ಓದಿ ಮುಗಿಸಿದ ನಂತರ "ಅಬ್ಬಾ ಇಷ್ಟೋಂದಾ?" ಎಂದು ಅಂದುಕೊಳ್ಳುವುದು ಅನಿವಾರ್ಯವಾಗಿ ಬಿಡುತ್ತದೆ. ಸುಮಾರು ಒಂದೂವರೆ ವರ್ಷಗಳ ಅವಧಿಯಲ್ಲಿನ ಪ್ರತಿದಿನದ ದಿನಚರಿಯು ನಿಜಕ್ಕೂ ಅನುವಾದ ಯೋಗ್ಯವಾಗಿದ್ದು, ಉತ್ತಮವಾದ, ಕನ್ನಡದ ಗ್ರಂಥಸ್ಥ ಭಾಷೆಯ ಯುಕ್ತ ಬಳಕೆಯಿರುವ ಅನುವಾದಕರ ಅನುವಾದದ ಪ್ರಾಮಾಣಿಕ ಪ್ರಯತ್ನವು ನಿಜಕ್ಕೂ ಸ್ತುತ್ಯರ್ಹ. ಯುಕ್ತ ಸಾಹಿತ್ಯವನ್ನು ಮುಕ್ತಗೊಳಿಸಿ ಶಿಕ್ಷಣ ಕ್ಷೇತ್ರವನ್ನು ಇನ್ನಷ್ಟು ಶಕ್ತಗೊಳಿಸುವ ಪವಿತ್ರ ಕೈಂಕರ್ಯದಲ್ಲಿ ತೊಡಗಿಸಿಕೊಂಡಿರುವ ಅಜೀಮ್ ಪ್ರೇಮ್‌ಜೀ ಪ್ರಕಾಶನದ ಪ್ರಮುಖರು ಅಭಿನಂದನಾರ್ಹರು. ಅವರ ಸಾಹಿತ್ಯ ಸೇವೆಗೆ ಅಮರತ್ವ ಲಭಿಸಲೆಂದು ಆಶಿಸುತ್ತೇನೆ.

**– ಎಸ್. ಸುದರ್ಶನ್**
ವಕೀಲರು, ಮಂಡ್ಯ

ನಮ್ಮ ದೇಶದ ಶಿಕ್ಷಣದ ದುರವಸ್ಥೆಗೆ ಅಧಿಕಾರಶಾಹಿ ಒಲವುಗಳಿಂದ ಕೂಡಿದ ಶಿಕ್ಷಣ ಇಲಾಖೆಯೇ ಕಾರಣವೆಂದು ನನಗೆ ಅನೇಕ ಸಲ ಅನ್ನಿಸಿದೆ. ಅನುದಾನರಹಿತವಾಗಿ ಕನ್ನಡ ಮಾಧ್ಯಮದಲ್ಲಿ ಪ್ರಾಥಮಿಕ ಶಾಲೆ ನಡೆಸುವ ನನ್ನ ಅನಿಸಿಕೆಗಳಿಗೆ ಸಾಕಷ್ಟು ಆಧಾರಗಳು ಹೇಮರಾಜ ಭಟ್ಟರ ಡೈರಿಯಲ್ಲಿವೆ. ನಮ್ಮ ಇಡೀ ವ್ಯವಸ್ಥೆ ನಕಾರಾತ್ಮಕ ಭಾವನೆಗಳಲ್ಲಿ ಮುಳುಗಿ ಹೋಗಿದೆ ಎಂದು ಒಂದು ದಿನ ಅವರು ಬರೆದಿದ್ದಾರೆ. ಇದು ಅಕ್ಷರಶಃ ಸತ್ಯ. ಶಿಕ್ಷಣಾಧಿಕಾರಿಗಳು ಯಾವ ಶಿಕ್ಷಕರನ್ನೂ ನಂಬದಷ್ಟು ಪೂರ್ವಾಗ್ರಹ ಹೊಂದಿದ್ದಾರೆ. ಹಾಗಾಗಿಯೇ ಶಿಕ್ಷಣ ಇಲಾಖೆಯಲ್ಲಿ ಲಂಚ, ಕಮಿಶನ್, ಸ್ವಜನ ಪಕ್ಷಪಾತ, ಕೀಳರಿಮೆ, ಅಪನಂಬಿಕೆ ಮುಂತಾದ ದೋಷಗಳು ಎಷ್ಟರ ಮಟ್ಟಿಗೆ ತುಂಬಿವೆಯೆಂಬುದರ ಅನಾವರಣವು ಈ ಕೃತಿಯ ಪುಟ ಪುಟದಲ್ಲೂ ಆಗಿದೆ. ಹೇಮರಾಜ ಭಟ್ಟರ ಈ ದಿನಚರಿಯನ್ನು ಪ್ರಕಟಿಸುವುದರ ಮೂಲಕ ಅಜೀಮ್ ಪ್ರೇಮ್‌ಜಿ ಫೌಂಡೇಷನ್ ತುಂಬ ಉಪಯುಕ್ತ ಕೆಲಸ ಮಾಡಿದೆ. ನೂರಕ್ಕೆ ನೂರು ವೃತ್ತಿಗೆ ಅರ್ಪಿಸಿಕೊಂಡ ಯಾವನೇ ಒಬ್ಬ ಶಿಕ್ಷಕನ ಸೃಜನಶೀಲ ಕಾರ್ಯಗಳನ್ನು ಗುರುತಿಸದೆ ಮತ್ತು ಪ್ರೋತ್ಸಾಹಿಸದೆ ಆತನ ಆತ್ಮ ವಿಶ್ವಾಸವನ್ನು ಖಿಲಗೊಳಿಸುವ ಅದೆಷ್ಟೋ ಶಕ್ತಿಗಳು ಕಾರ್ಯೋನ್ಮುಖವಾಗಿವೆ ಎಂಬುದರ ಚಿತ್ರಣವು ಕೇವಲ ಒಂದು ರಾಜ್ಯದ ಸಂಗತಿಯಲ್ಲ. ಇಡೀ ದೇಶದಲ್ಲಿ ಇದೇ ಪರಿಸ್ಥಿತಿ ಇದೆ. ಈ ಪುಸ್ತಕವನ್ನು ಶಿಕ್ಷಣಾಧಿಕಾರಿಗಳೆಲ್ಲ ಓದುವಂತೆ ಮಾಡಬೇಕು. ಏಕೆಂದರೆ ತಾವೇನು ಮಾಡಬಾರದು ಎಂಬುದು ಮೊದಲಾಗಿ ಅವರಿಗೆ ತಿಳಿಯಬೇಕು. ಕೇವಲ ಹಣದ ಲೆಕ್ಕಾಚಾರದಲ್ಲಿ ಮುಳುಗದೆ ಗುಣಗ್ರಾಹಿಗಳಾಗಬೇಕಾದ ಅಗತ್ಯವನ್ನು ಅವರು ಮನಗಾಣಬೇಕು. ಮಕ್ಕಳ ಶಿಕ್ಷಣದ ಬಗ್ಗೆ ಅನಾಸಕ್ತಿ ಹೊಂದಿದ ಅನಕ್ಷರಸ್ಥ ಸಮುದಾಯದ ಬಡತನ ಮತ್ತು ಕೃಷಿಯಲ್ಲಿ ಮಕ್ಕಳ ದುಡಿಮೆ ಅನಿವಾರ್ಯವಾಗಿರುವ ಹಳ್ಳಿಗಳಲ್ಲಿ ಶಿಕ್ಷಣವು ಒಂದಿಷ್ಟಾದರೂ ಅರ್ಥಪೂರ್ಣವಾಗಬೇಕಿದ್ದರೆ ಹೇಮರಾಜರಂತೆ ಕಮಿಟ್‌ಮೆಂಟ್ ಇರುವ ಶಿಕ್ಷಕರು ಬೇಕು. ಸರಿಯಾಗಿ ಓದಲು ಬರೆಯಲು ಬಾರದ ಮಕ್ಕಳಿಗೆ ವಿಷಯವನ್ನು ಅರ್ಥ ಮಾಡಿಸಲು ಅವರೊಡನೆ ಹೆಚ್ಚಿಗೆ ಮಾತಾಡಬೇಕು ಎಂಬ ಅನುಭವದ ಮಾತು ಇದರಲ್ಲಿದೆ. ಆದರೆ ಏನನ್ನು ಮಾತಾಡಬೇಕು ಎಂಬುದು ಶಿಕ್ಷಕರ ಸೃಜನಶೀಲ ಚಿಂತನೆಗೆ ಬಿಟ್ಟ ವಿಚಾರ. ಶಿಕ್ಷಕರ ಹುದ್ದೆಯನ್ನು ಒಂದು ಉದ್ಯೋಗವೆಂದು ಪರಿಗಣಿಸದೆ ಅದೊಂದು ಪ್ರವೃತ್ತಿಯಾಗಿರುವವರಿಂದಷ್ಟೇ ಇದು ಸಾಧ್ಯ. ಅಂತಹ ಆಸಕ್ತಿ ಬೆಳೆಸಿಕೊಳ್ಳಲು ಮತ್ತು ಸವಾಲುಗಳನ್ನೆದುರಿಸುವ ಛಲ ಮೂಡಲು ಎಲ್ಲಾ ಶಿಕ್ಷಕರೂ ಈ ಕೃತಿಯನ್ನೋದಬೇಕು.

**– ಡಾ. ಚಂದ್ರಶೇಖರದಾಮ್ಲೆ,**
ಅಧ್ಯಕ್ಷರು, ಸ್ನೇಹ ಶಿಕ್ಷಣ ಸಂಸ್ಥೆ, ಸುಳ್ಯ, ದಕ್ಷಿಣ ಕನ್ನಡ ಜಿಲ್ಲೆ.

The translation is good. Every teacher should read this book. This reminds me of the Shantiniketan model to some extent. Love, compassion, commitment and eternal quest for knowledge are the basic qualities of a good teacher. Teaching should not be like pelting stones on flowers opening their petals. Thanking you for the inspiring book.

**- Ramanath Bhat**
Litterateur, Mysore

## ಅಜೀಮ್ ಪ್ರೇಮ್‌ಜೀ ವಿಶ್ವವಿದ್ಯಾಲಯ

ಅಜೀಮ್ ಪ್ರೇಮ್‌ಜೀ ಫೌಂಡೇಷನ್ ಒಂದು ಲಾಭರಹಿತ ಸಂಸ್ಥೆಯಾಗಿದ್ದು, ಭಾರತದಲ್ಲಿ ಗುಣಾತ್ಮಕ ಶಿಕ್ಷಣ ಮತ್ತು ಸಮಾನತೆಯನ್ನು ಸಾಧಿಸುವ ನಿಟ್ಟಿನಲ್ಲಿ ಆಳವಾದ, ಬೃಹತ್ ಪ್ರಮಾಣದ ಮತ್ತು ಸಾಂಸ್ಥೀಕರಣದ ಮೂಲಕ ದೀರ್ಘಾವಧಿ ಪರಿಣಾಮ ಬೀರಲು ಕಾರ್ಯನಿರ್ವಹಿಸುತ್ತಿದೆ. ಇದಲ್ಲದೆ ಫೌಂಡೇಷನ್ ಮಕ್ಕಳ ಆರೋಗ್ಯ, ಪೌಷ್ಟಿಕಾಂಶ, ಆಡಳಿತ ಮತ್ತು ಪರಿಸರ ಮುಂತಾದ ಅಭಿವೃದ್ಧಿ ಕ್ಷೇತ್ರಗಳಲ್ಲಿಯೂ ತೊಡಗಿಸಿಕೊಂಡಿದೆ. ಅಜೀಮ್ ಪ್ರೇಮ್‌ಜೀ ಫೌಂಡೇಷನ್ ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ಒಂದು ದಶಕದ ಕಾಲ ಕೆಲಸ ಮಾಡಿದ ಅನುಭವ ಮತ್ತು ಕಲಿಕೆಯ ಆಧಾರದ ಮೇಲೆ ಅಜೀಮ್ ಪ್ರೇಮ್‌ಜೀ ವಿಶ್ವವಿದ್ಯಾಲಯವು ನೆಲೆಗೊಂಡಿದೆ.

ಭಾರತವು ಶಿಕ್ಷಣ ಮತ್ತು ಅಭಿವೃದ್ಧಿ ಕ್ಷೇತ್ರಗಳಲ್ಲಿ ಸಾಬೀತುಪಡಿಸಿದ ಸಿದ್ಧಾಂತ ಮತ್ತು ಜ್ಞಾನ, ಸಮರ್ಥ ಹಾಗೂ ಪುನರ್ ಅವಲೋಕಿಸುವ ವೃತ್ತಿಪರರ ಕೊರತೆಯನ್ನು ಎದುರಿಸುತ್ತಿದ್ದು, ಈ ಸವಾಲುಗಳನ್ನು ಸಮರ್ಪಕವಾಗಿ ಎದುರಿಸಲು ಪ್ರತಿಷ್ಠಾನವು ಅಜೀಮ್ ಪ್ರೇಮ್‌ಜೀ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದೆ. ವಿಶ್ವವಿದ್ಯಾಲಯವು ಹೊಸ ಪ್ರತಿಭೆಗಳನ್ನು ಅಭಿವೃದ್ಧಿಪಡಿಸುವುದು ಮತ್ತು ಜ್ಞಾನವನ್ನು ಸೃಷ್ಟಿಸುವುದರಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದೆ. ಈ ಜ್ಞಾನ ಮತ್ತು ಪ್ರತಿಭೆಗಳು ವೇಗವರ್ಧಕವಾಗಿ ಕಾರ್ಯನಿರ್ವಹಿಸುವುದರ ಮೂಲಕ ಶಿಕ್ಷಣ ಮತ್ತು ಅದಕ್ಕೆ ಸಂಬಂಧಿಸಿದ ಅಭಿವೃದ್ಧಿ ಕ್ಷೇತ್ರಗಳಲ್ಲಿ ಸುಸ್ಥಿರ ಬೆಳವಣಿಗೆಯನ್ನು ಸಾಧಿಸುವುದಾಗಿದೆ. ಈ ವಿಶ್ವವಿದ್ಯಾಲಯಕ್ಕೆ ತನ್ನದೇ ಆದ ಸಾಮಾಜಿಕ ಕಳಕಳಿಯಿದ್ದು, ಭಾರತದಲ್ಲಿ ಶಿಕ್ಷಣ ಮತ್ತು ಅಭಿವೃದ್ಧಿ ಕ್ಷೇತ್ರಗಳಲ್ಲಿ ಕೆಲಸ ಮಾಡುವ ಏಕೈಕ ವಿಶ್ವವಿದ್ಯಾಲಯವಾಗಿದೆ. ಈ ಮೂಲಕ ನ್ಯಾಯ ಸಮ್ಮತ, ಸಮಾನ, ಮಾನವೀಯ ಹಾಗೂ ಸುಸ್ಥಿರ ಸಮಾಜ ನಿರ್ಮಾಣಕ್ಕಾಗಿ ಮಹತ್ತರ ಕೊಡುಗೆ ನೀಡುವ ಉದ್ದೇಶವನ್ನು ಹೊಂದಿರುತ್ತದೆ.



## SOME ABBREVIATIONS:

| | | |
|---|---|---|
| N.P.R.C. | - | ನ್ಯಾಯ ಪಂಚಾಯ್ತಿ ಸಂಪನ್ಮೂಲ ಕೇಂದ್ರ.<br>(NYAYA PANCHAYAT RESOURCE CENTRE) |
| C.R.C. | - | ಸಮೂಹ ಸಂಪನ್ಮೂಲ ಕೇಂದ್ರ.<br>(CLUSTER RESOURCE CENTRE) |
| T.C. | - | ವರ್ಗಾವಣೆ ಪತ್ರ.<br>(TRANSFER CERTIFICATE) |
| M.D.M. | - | ಮಧ್ಯಾಹ್ನದ ಬಿಸಿ ಊಟ./ ಅಕ್ಷರ ದಾಸೋಹ ಯೋಜನೆ.<br>(MID DAY MEALS) |
| M.T. | - | ಮುಖ್ಯ ತರಬೇತುದಾರ.<br>(MASTER TRAINER) |
| D.P.E.P. | - | ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ.<br>(DISTRICT PRIMARY EDUCATION PROGRAMME) |
| T.A. | - | ಪ್ರಯಾಣ ಭತ್ಯೆ.<br>(TRAVELLING ALLOWANCE) |
| D.A. | - | ದಿನ ಭತ್ಯೆ.<br>(DAILY ALLOWANCE) |
| B.S.A. | - | ಪ್ರಾಥಮಿಕ ಶಿಕ್ಷಣಾಧಿಕಾರಿ.<br>(BASIC SHIKSHA ADHIKARI) |
| B.R.C. | - | ಕ್ಷೇತ್ರ ಸಂಪನ್ಮೂಲ ಕೇಂದ್ರ.<br>(BLOCK RESOURCE CENTRE) |
| B.E.O. | - | ಕ್ಷೇತ್ರ ಶಿಕ್ಷಣಾಧಿಕಾರಿಗಳು.<br>(BLOCK EDUCATION OFFICER) |
| D.E.O. | - | ಜಿಲ್ಲಾ ಶಿಕ್ಷಣಾಧಿಕಾರಿಗಳು.<br>(DISTRICT EDUCATION OFFICER) |
| D.P.O. | - | ಜಿಲ್ಲಾ ಯೋಜನಾಧಿಕಾರಿಗಳು.<br>(DISTRICT PROJECT OFFICER) |
| J.E. | - | ಕಿರಿಯ ಅಭಿಯಂತರರು.<br>(JUNIOR ENGINEER) |
| B.L.O. | - | ಮತಗಟ್ಟೆ ಹಂತದ ಅಧಿಕಾರಿ.<br>(BOOTH LEVEL OFFICER) |



**ಹೇಮರಾಜ್ ಭಟ್** (22.6.1968 – 25.11.2008) ಇವರು ಉತ್ತರಾಖಂಡ್ ರಾಜ್ಯದ ಉತ್ತರಕಾಶಿ ಜಿಲ್ಲೆಯಲ್ಲಿರುವ ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ ಸಹ ಶಿಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದರು. ಹೇಮರಾಜ್ ಭಟ್‌ರವರು ತಾವು ಕಾರ್ಯನಿರ್ವಹಿಸುತ್ತಿದ್ದ ಪರಿಸರದಲ್ಲಿ ತಮ್ಮ ಪ್ರಯತ್ನಗಳಿಗೆ ಪ್ರೇರಣೆ ದೊರಕದ ಹೊರತಾಗಿಯೂ ಹಾಗೂ ಎದುರಿಸಿದ ಹಲವಾರು ಸಮಸ್ಯೆ, ಸವಾಲುಗಳ ನಡುವೆಯೂ ಇವರು ನಿಜಕ್ಕೂ ಗಮನಾರ್ಹ ಶಿಕ್ಷಕರಾಗಿದ್ದರು. ಶಾಲಾ ಶಿಕ್ಷಣದಲ್ಲಿನ ಅವರ ಆಸಕ್ತಿ ಮತ್ತು ಮಕ್ಕಳ ಮೇಲಿನ ಅಪಾರ ಪ್ರೀತಿ ವಿಶ್ವಾಸವನ್ನು ಅವರ ವೃತ್ತಿಪರ ಮತ್ತು ವೈಯಕ್ತಿಕ ಜೀವನವನ್ನು ಬಿಂಬಿಸುತ್ತದೆ.

ದುರದೃಷ್ಟವಶಾತ್, ಹೇಮರಾಜ್ ಅವರ ಜೀವನ 2008 ರಲ್ಲಿ ಒಂದು ರಸ್ತೆ ಅಪಘಾತದಲ್ಲಿ ಕೊನೆಗೊಂಡಿತು. ಆದರೆ ಈ ಅಲ್ಪ ಅವಧಿಯಲ್ಲಿ ಅವರು ಮಾಡಿದಂತಹ ಕೆಲಸಗಳು, ಕವಿತೆಗಳು ಹಾಗೂ ಬರಹಗಳ ಮೂಲಕ ಅವರ ಆಪ್ತವಲಯದವರೆಲ್ಲರ ಮೇಲೆ ಶಾಶ್ವತವಾದ ಪ್ರಭಾವವನ್ನು ದಾಖಲಿಸಿ ಹೋಗಿದ್ದಾರೆ.

ಹೇಮರಾಜ್ ಸಹ ತಮ್ಮ ದೈನಂದಿನ ಬದುಕಿನಲ್ಲಾದ ಅನೇಕ ಅನುಭವಗಳನ್ನು ತಮ್ಮ ದಿನಚರಿಯಲ್ಲಿ ದಾಖಲಿಸಿದರು. ಈ ದಿನಚರಿಯ ಪುಟಗಳಲ್ಲಿ ಅವರ ಹೋರಾಟ, ಶ್ರಮ ಹಾಗೂ ಸಂತೋಷದ ಕ್ಷಣಗಳ ಮಿನುಗು ನೋಟವನ್ನು ನೋಡಿದಾಗ, ಅವರು ಬೋಧನೆಯ ಹೊರತಾಗಿ ಮತ್ತೊಂದು ವೃತ್ತಿಯನ್ನು ತಮ್ಮ ಜೀವನದಲ್ಲಿ ಪರಿಗಣಿಸಿಲ್ಲವೆಂದು ಕಾಣುತ್ತದೆ. ಹೇಮರಾಜ್‌ರವರು ತಮ್ಮ ದಿನಚರಿಯಲ್ಲಿ ಸರ್ಕಾರಿ ಶಾಲೆಯ ಶಿಕ್ಷಕನೋರ್ವನ ವೈಯಕ್ತಿಕ ಪಯಣವನ್ನು ವಿವರಿಸಿದ್ದಾರೆ. ಇದು ಭಾರತದಲ್ಲಿರುವ ಬೃಹತ್ ಶಿಕ್ಷಣ ವ್ಯವಸ್ಥೆಗೆ ಹಿಡಿದ ಕನ್ನಡಿಯಂತಿದೆ.




Azim Premji University

Pixel Park, B Block, PES Campus
Electronics City, Hosur Road,
Bengaluru 560100
www.azimpremjiuniversity.edu.in